ಎಲ್ಲ ದೇಶಗಳ ಮಕ್ಕಳಿಗಾಗಿ

# ಏಷ್ಯಾದ ಜಾನಪದ ಕಥೆಗಳು









ಎಲ್ಲ ದೇಶಗಳ ಮಕ್ಕಳಿಗಾಗಿ

# ಏಷ್ಯಾದ ಜಾನಪದ ಕಥೆಗಳು

ಏಷ್ಯನ್ ಕಲ್ಚರಲ್ ಸೆಂಟರ್ ಫರ್ ಯುನೆಸ್ಕೊ ಅವರ ಯೋಜನೆಯ ಅನ್ವಯ
ಏಷ್ಯನ್ ಸಹ-ಪ್ರಕಾಶನ ಕಾರ್ಯಕ್ರಮದ ಅಂಗವಾಗಿ ಪ್ರಕಟವಾಗಿದೆ.

ಕನ್ನಡ ಅನುವಾದ:

ಶಾ. ಬಾಲುರಾವ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಹೊಸ ದೆಹಲಿ

1984 (1906)

*This book has been published under the Asian Co-publication Programme carried out, in co-operation with Unesco, by the Asian Cultural Centre. The stories in the volume have been selected and edited by a five-country central editorial board in consultation with the UNESCO member states in Asia.*



FOLK TALES FROM ASIA— (*Kannada*)

**Rs. 12.00**

Published by the Director, National Books Trust, India, A-5 Green Park, New Delhi-110016 and printed at Rajbandhu Industrial Co., C-61 Maya Puri Phase II New Delhi-64, Illustrations printed by Thomson Press (India) Limited Faridabad and artpulls supplied by Sharda Press, Mangalore-1

# ಏಷ್ಯಾದ ಜಾನಪದ ಕಥೆಗಳು

## ಎಲ್ಲ ದೇಶಗಳ ಮಕ್ಕಳಿಗಾಗಿ

ಯುನೆಸ್ಕೊ ಸಂಸ್ಥೆ ಏಷ್ಯಾದಲ್ಲಿ ಪುಸ್ತಕ ತಯಾರಿಕೆ ಹಾಗೂ ವಿತರಣೆಯಲ್ಲಿ ತೊಡಗಿರುವ ತಜ್ಞರ ಒಂದು ಸಭೆಯನ್ನು ೧೯೬೭ರ ಮೇ ತಿಂಗಳಲ್ಲಿ, ಜಪಾನಿನ ತೋಕಿಯೋ ನಗರದಲ್ಲಿ ಕರೆದಿತ್ತು. ಆ ಸಭೆಯಲ್ಲಿ ಅನೇಕ ತಜ್ಞರು ಮಕ್ಕಳಿಗೆ ಸರಿಹೊಂದುವ ಸಚಿತ್ರ ಪುಸ್ತಕಗಳನ್ನು ಒದಗಿಸುವುದು ಎಷ್ಟು ಮುಖ್ಯ ಹಾಗೂ ಅತ್ಯಗತ್ಯ ಎಂಬುದನ್ನು ಎತ್ತಿಹೇಳಿದರು. ಅದರಲ್ಲಿಯೂ ವಿಶೇಷವಾಗಿ, ಅಂತಹ ಪುಸ್ತಕಗಳನ್ನು ಪ್ರಕಟಿಸ ಬಯಸುವ ಬೇರೆಬೇರೆ ದೇಶಗಳವರು ಚಿತ್ರಗಳನ್ನೂ ಅವುಗಳ ಅಚ್ಚಿನ ತಟ್ಟೆಗಳನ್ನೂ ಹಂಚಿಕೊಳ್ಳುವ ಮೂಲಕ ಪುಸ್ತಕ ಪ್ರಕಟಣೆಯ ಖರ್ಚನ್ನು ಕಡಿಮೆ ಮಾಡಬೇಕೆಂದು ಅವರು ಒತ್ತಿನುಡಿದರು.

೧೯೬೮ರ ಏಪ್ರಿಲ್ ತಿಂಗಳಲ್ಲಿ, ಕುವಲಾಲುಂಪುರ್‌ನಲ್ಲಿ. ಯುನೆಸ್ಕೊ ಕರೆದಿದ್ದ ರೀಜನಲ್ ಕೋ–ಆರ್ಡಿನೇಟಿಂಗ್ ಕಮಿಟಿ ಫರ್ ದಿ ರೀಡಿಂಗ್ ಮೆಟೀರಿಯಲ್ ಪ್ರಾಜೆಕ್ಟ್‌ನ ಮೂರನೆಯ ಸಭೆಯಲ್ಲಿ, ಕೆಲವು ಪ್ರತಿನಿಧಿಗಳು ಮೇಲೆ ಹೇಳಿದ ಯೋಜನೆಯಲ್ಲಿ ಚಿತ್ರ ಮತ್ತು ಅಚ್ಚಿನ ತಟ್ಟೆಗಳ ಜತೆಗೆ ಓದಿನ ಸಾಮಗ್ರಿಯ ಹಂಚಿಕೆಯನ್ನೂ ಸೇರಿಸಿ, ಯೋಜನೆಯ ವ್ಯಾಪ್ತಿಯನ್ನು ವಿಸ್ತರಿಸಬೇಕೆಂಬ ಪ್ರಸ್ತಾಪ ತಂದರು. ಅದರ ಫಲವಾಗಿ, ಜಪಾನಿನ ನೇಷನಲ್ ಕಮೀಷನರ್ ಫರ್ ಯುನೆಸ್ಕೊ ಮುಖಾಂತರ ಕೆಲಸ ನಡೆಸುವ ತೋಕಿಯೋ ಬುಕ್ ಡೆವಲಪ್‌ಮೆಂಟ್ ಸೆಂಟರ್‌ಗೆ (ಮುಂದೆ ಈ ಸಂಸ್ಥೆ ಏಷ್ಯನ್ ಕಲ್ಚರಲ್ ಸೆಂಟರ್ ನೊಂದಿಗೆ ವಿಲೀನವಾಯಿತು) ಏಷ್ಯಾದ ಮಕ್ಕಳಿಗೆ ಸಾಧ್ಯವಾದಷ್ಟು ಅಗ್ಗದ ಬೆಲೆಯಲ್ಲಿ ಒಳ್ಳೆಯ ಸಚಿತ್ರ

ಮಕ್ಕಳ ಪುಸ್ತಕಗಳನ್ನು ಸಾಕಷ್ಟು ಪ್ರಮಾಣದಲ್ಲಿ ಒದಗಿಸುವುದಕ್ಕಾಗಿ ಒಂದು ಸರ್ವೋಪಯೋಗಿಯಾದ ಓದಿನ ಸಾಮಗ್ರಿ ಯೋಜನೆಯನ್ನು ಕೂಡಲೇ ಆರಂಭಿಸುವ ಜವಾಬ್ದಾರಿಯನ್ನು ವಹಿಸಿಕೊಡಲಾಯಿತು. ಜತೆಗೇ ಈ ಯೋಜನೆಯ ಗುರಿ ಅಂತರರಾಷ್ಟ್ರೀಯ ತಿಳಿವಳಿಕೆಯನ್ನು ಹೆಚ್ಚಿಸುವುದೂ ಆಗಿತ್ತು.

ಇದೀಗ. ಮೂರು ವರ್ಷಗಳ ಸತತ ಪ್ರಯತ್ನ ಮತ್ತು ಯೋಜನೆಗಳ ಫಲವಾಗಿ ಈ ಪುಸ್ತಕ ಮೂರ್ತ ಸ್ವರೂಪ ಪಡೆದಿದೆ. ಯುನೆಸ್ಕೊ. ಏಷ್ಯಾ ದೇಶಗಳ ನೇಷನಲ್ ಕಮಿಷನ್‌ಗಳು ಹಾಗೂ ಸಂಬಂಧಪಟ್ಟ ತಜ್ಞರುಗಳ ಹಾರ್ದಿಕ ಸಹಕಾರ ಮತ್ತು ಉತ್ತೇಜನಗಳ ಕೃಪೆಯಿಂದಾಗಿ, 'ಏಷ್ಯನ್ ಕೋ-ಪಬ್ಲಿಕೇಷನ್ ಪ್ರೋಗ್ರಾಮ್' ಎಂದು ಕರೆಸಿಕೊಂಡ ಈ ಯೋಜನೆ ಇಲ್ಲಿ ತನ್ನ ಪೂರ್ಣರೂಪದಲ್ಲಿ ಬೆಳಕು ಕಂಡಿದೆ. ಈ ಪುಸ್ತಕದ ಬರವಣಿಗೆಯಲ್ಲಿ ಯುನೆಸ್ಕೋದ ಹದಿನಾರು ಸದಸ್ಯರಾಷ್ಟ್ರಗಳು ಭಾಗಿಯಾಗಿವೆ: ಅವೆಂದರೆ ಬಾಂಗ್ಲದೇಶ. ಭಾರತ, ಇಂಡೋನೇಷಿಯಾ, ಇರಾನ್, ಜಪಾನ್, ಖಮೇರ್ ಗಣರಾಜ್ಯ, ಕೊರಿಯಾ, ಲಾವೋಸ್. ಮಲೇಷಿಯಾ. ನೇಪಾಳ, ಪಾಕಿಸ್ತಾನ, ಫಿಲಿಪೈನ್ಸ್, ಸಿಂಗಪುರ, ಶ್ರೀಲಂಕ, ಥೈಲ್ಯಾಂಡ್ ಮತ್ತು ವಿಯತ್ ನಾಮ್. ಈ ಒಂದೊಂದು ದೇಶದಿಂದಲೂ ಒಂದೊಂದು ಪ್ರಾತಿನಿಧಿಕ ಕಥೆಯನ್ನು ಮಾಲೆಯಲ್ಲಿ ಸೇರಿಸಲಾಗಿದೆ.

ಸಹಭಾಗೀ ರಾಷ್ಟ್ರಗಳಿಂದ ಬಂದ ಕಥೆಗಳ ಇಂಗ್ಲಿಷ್‌ನ ಮೂಲಪಾಠಗಳನ್ನು ಕೇಂದ್ರ ಸಂಪಾದನ ಸಮಿತಿ ಇಂಗ್ಲೆಂಡಿನ ಮಿಸ್ ಐಲೀನ್ ಕಾಲ್ವೆಲ್‌ರ ಅಮೂಲ್ಯ ಸಹಾಯದಿಂದ ಸಂಪಾದಿಸಿ ತಕ್ಕಂತೆ ಹೊಂದಿಸಿಕೊಂಡಿದೆ. ಕಥೆಗಳ ಮೂಲರೂಪಕ್ಕೆ ಭಂಗ ತಾರದೆ. ಅವುಗಳನ್ನು ಇತರ ದೇಶ, ಇತರ ಸಂಸ್ಕೃತಿಗಳ ಮಕ್ಕಳು ತಕ್ಷಣ ಗ್ರಹಿಸುವಂತೆ ಮಾಡುವುದು ಸಂಪಾದನೆಯ ಉದ್ದೇಶ. ಸಹಭಾಗೀ ದೇಶಗಳು ತಮ್ಮ ತಮ್ಮ ದೇಶಭಾಷೆಗಳಲ್ಲಿ ಇದನ್ನು ಅನುವಾದಿಸಿ ಪ್ರಕಟಿಸುವಾಗ ಇಂಗ್ಲಿಷಿನ ಪಾಠವನ್ನು ಮೂಲವಾಗಿಟ್ಟುಕೊಳ್ಳುತ್ತಾರೆ. ಸಹಭಾಗೀ ದೇಶಗಳು ಈ ಪುಸ್ತಕದಲ್ಲಿನ ವರ್ಣಚಿತ್ರಗಳ ಫಿಲ್ಮ್‌ಅನ್ನು ಸಹ ಹಂಚಿಕೊಂಡು ತಮ್ಮ ತಮ್ಮ ಭಾಷಾಸಂಸ್ಕರಣಗಳನ್ನು ಪ್ರಕಟಿಸುತ್ತವೆ. ಭಾರತದಲ್ಲಿ. ಕೇಂದ್ರ ಶಿಕ್ಷಣ ಸಚಿವಾಲಯ ಹಾಗೂ ಇಂಡಿಯನ್ ಕಮಿಷನ್ ಫರ್ ಕೋ–ಆಪರೇಷನ್ ವಿತ್ ಯುನೆಸ್ಕೋ ಅವರು ಈ ಪುಸ್ತಕದ ಇಂಗ್ಲಿಷ್ ಮತ್ತು ಭಾರತೀಯ ಭಾಷಾ ಸಂಸ್ಕರಣಗಳ ಪ್ರಕಟನೆಯನ್ನು ನೇಷನಲ್ ಬುಕ್ ಟ್ರಸ್ಟ್‌ಗೆ ವಹಿಸಿಕೊಟ್ಟಿದ್ದಾರೆ. ನೇಷನಲ್ ಬುಕ್ ಟ್ರಸ್ಟಿನೊಂದಿಗೆ ಜತೆಗೂಡಿ ದಿಲ್ಲಿಯ ರಾಜಪಾಲ್ ಅಂಡ್ ಸನ್ಸ್ ಅವರು ಇಂಗ್ಲಿಷ್ ಮತ್ತು ಹಿಂದೀ ಸಂಸ್ಕರಣಗಳನ್ನು ಪ್ರಕಟಿಸಿದ್ದಾರೆ. ಭಾರತದ ಉಳಿದ ಭಾಷೆಗಳಲ್ಲಿ ನೇಷನಲ್ ಬುಕ್ ಟ್ರಸ್ಟ್ ತಾನೇ ಪ್ರಕಟಿಸುತ್ತಲಿದೆ.

ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿನ ಈ ಹೊಸ ದಿಟ್ಟ ಸಾಹಸ ಹೂಬಿಟ್ಟು. ಏಷ್ಯಾ ಮತ್ತು ಪ್ರಪಂಚದ ಮಕ್ಕಳ ಪಾಲಿಗೆ ಬೆಲೆಯುಳ್ಳದ್ದಾಗುತ್ತದೆಂದು ನಮ್ಮ ಹಾರ್ದಿಕ ಆಶಯ. ಅಂತರರಾಷ್ಟ್ರೀಯ ತಿಳಿವಳಿಕೆ ಹಾಗೂ ಸಹಕಾರ ತತ್ವದ ಪೋಷಣೆಗೆ ಈ ರೀತಿಯಲ್ಲಿ ನಮ್ಮ ಕಾಣಿಕೆ ಸಲ್ಲಿಸಿ, ನಾವು ಎಲ್ಲೆಡೆಯ ಮಕ್ಕಳ ಮನಸ್ಸಿನಲ್ಲಿ ಶಾಂತಿಯ ರಕ್ಷಣೆಗಾಗಿ ಕೋಟೆ ಕಟ್ಟಬಯಸುತ್ತೇವೆ.

# ಈ ಪುಸ್ತಕದ ಕಥೆಗಳು

# ಎಲ್ಲ ದೇಶಗಳ ಮಕ್ಕಳಿಗಾಗಿ

ಇದೊ, ವಿಶ್ವದ ಕೆಲವು ಪುರಾತನ ಕಥೆಗಳು ಇಲ್ಲಿವೆ. ಮಕ್ಕಳು ಮೊಮ್ಮಕ್ಕಳು ಎಷ್ಟೋ ಕಾಲದಿಂದ ತಮ್ಮ ಅಮ್ಮ ಅಜ್ಜಿಯರ ಸಿಹಿಮಾತಿನಲ್ಲಿ ಈ ಕಥೆಗಳನ್ನು ತುಂಬ ಉತ್ಸಾಹದಿಂದ ಕೇಳುತ್ತ ಬಂದಿದ್ದಾರೆ. ಇವುಗಳಲ್ಲಿ ಕೆಲವು ಕಥೆಗಳು ಕೇವಲ ತಮ್ಮ ದೇಶಕ್ಕಷ್ಟೇ ಸೀಮಿತವಾಗಿರದೆ ಇತರ ದೇಶಗಳಲ್ಲಿಯೂ ಪ್ರಚಾರ ಪಡೆದಿವೆ. ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಪ್ರವಾಸ ಮಾಡುವಾಗ ಅವುಗಳ ಹೊರ ಮೈಯಲ್ಲಿ ಅಲ್ಪಸ್ವಲ್ಪ ಮಾರ್ಪಾಡಾದರೂ ಮೂಲಕಥೆಯಲ್ಲಿ ಯಾವ ವಿಶೇಷ ಬದಲಾವಣೆಯಾಗಿರುವುದೂ ಕಂಡುಬರುವುದಿಲ್ಲ. ಈ ಕಥೆಗಳು ಸುಖದುಃಖ, ಸಾಹಸೀ ಪ್ರವಾಸ, ಶೌರ್ಯಪರಾಕ್ರಮಗಳ ಕಥೆಗಳೇ ಆಗಿವೆ. ಇವುಗಳಲ್ಲಿನ ಘಟನೆಗಳು ಎಷ್ಟೇ ಬೇರೆಬೇರೆ ಬಗೆಯವಾದರೂ ಎಲ್ಲದರಲ್ಲಿಯೂ ಕೊನೆಗೆ ಸತ್ಯಕ್ಕೇ ಜಯವಾಗಿ ಅಸತ್ಯಕ್ಕೆ ಸೋಲುಂಟಾಗುತ್ತದೆ. ಪ್ರಪಂಚದಲ್ಲಿ ಎಲ್ಲೆಡೆಯಲ್ಲಿಯೂ ಪ್ರಚಲಿತವಾಗಿರುವ ವಿಚಾರ, ಭಾವನೆ ಮತ್ತು ಮೌಲ್ಯಗಳು ಈ ಕಥೆಗಳಿಗೆ ಆಧಾರವಾಗಿರುವುದರಿಂದ ಇವುಗಳ ರೂಪ ಸುಮಾರು ಒಂದೇ ಬಗೆಯಾಗಿದೆ. ಆದ ಕಾರಣ. ಈ ಕಥೆಗಳ ಮೂಲಕ ದೊರೆಯುವ ಶಿಕ್ಷಣ ಸರ್ವವ್ಯಾಪಿಯಾದದ್ದು.

ಈ ಪುಸ್ತಕದಲ್ಲಿನ ಕಥೆಗಳು ನಿಜವಾದ ಮನುಷ್ಯರದ್ದೇ ಆಗಿರಲಿ, ಕಾಲ್ಪನಿಕ ಪಾತ್ರಗಳದ್ದೇ ಆಗಿರಲಿ, ಒಂದು ಮಾತು ಮಾತ್ರ ನಿಜ: ಇವುಗಳಲ್ಲಿ ಒಂದೇ ಮಣ್ಣುನೀರುಗಳ ಗಂಧವಿದೆ. ಯಾಕೆಂದರೆ ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಮಣ್ಣುನೀರುಗಳು ಒಂದೇ ಬಗೆಯಾಗಿರುತ್ತವೆ. ನಮ್ಮ ಉಡಿಗೆತೊಡಿಗೆ, ನಮ್ಮ ಚರ್ಮದ ಬಣ್ಣ ರೂಪ ಬೇರೆಬೇರೆಯಾದರೂ ನಮ್ಮೆಲ್ಲರ ಹೃದಯದ ಬಣ್ಣ ರೂಪ ಒಂದೇ ಆಗಿರುತ್ತದೆ. ಅವುಗಳ ಬಡಿತ ಸಹ ಒಂದೇ ತೆರನಾಗಿದ್ದು ನಮ್ಮೆಲ್ಲರ ಧಮನಿಗಳಲ್ಲಿ ಹರಿಯುವ ರಕ್ತ ಸಹ ಒಂದೆ ರೀತಿ ಕೆಂಪಗೆ ಬಿಸಿಯಾಗಿರುತ್ತದೆ.

ವಿಶ್ವದಲ್ಲಿ ಸರ್ವಶ್ರೇಷ್ಠವಾದದ್ದು ಎಲ್ಲವೂ ಇಲ್ಲಿದೆ. ಮಂಜು ಕವಿದ ಎತ್ತರವಾದ ಬೆಟ್ಟಗಳು, ನದಿಗಳ ಹರಿಯುವ ಧಾರೆ, ಅಲೆಯಾಡುವ ಸಮುದ್ರ, ನೀಲಿಯ ಆಕಾಶ, ಕಾಡುಬಯಲುಗಳಲ್ಲಿ ಸ್ವಚ್ಛಂದವಾಗಿ ಓಡಾಡುವ ಸುಂದರ ಪ್ರಾಣಿಗಳು, ರಾಜರಾಣಿಯರು ಹಾಗೂ ಸಾಮಾನ್ಯ ಜನ. ಈ ಕಥೆಗಳು ಎಲ್ಲೆಲ್ಲೂ ಜನಪ್ರಿಯವಾಗಿವೆ. ಮೊತ್ತಮೊದಲು ಇವುಗಳನ್ನು ಹೇಳಿದವರು ಯಾರು ಎಂಬುದನ್ನು ಜನ ಸುಲಭವಾಗಿ ಮರೆತುಬಿಡುತ್ತಾರೆ. ಅವರಿಗೆ ಇವು ತಮ್ಮವೇ ಎಂದು ಅನಿಸುತ್ತದೆ. ಯಾಕೆಂದರೆ ಈ ಕಥೆಗಳು ನೇರವಾಗಿ ಮನುಷ್ಯನ ಹೃದಯವನ್ನು ಮುಟ್ಟುತ್ತವೆ. ಅಲ್ಲಿ ಯಾವ ರೀತಿಯ ಭೇದಭಾವವೂ ಇರುವುದಿಲ್ಲ. ಇವು ನಿಮಗೂ ಮೆಚ್ಚಿಗೆಯಾಗುವವೆಂದು ನಮಗೆ ಪೂರ್ಣ ವಿಶ್ವಾಸವಿದೆ.

## ಬಾಂಗ್ಲಾ ದೇಶ

# ಕಾಗೆ — ಗುಬ್ಬಚ್ಚಿ

ಒಂದಾನೊಂದು ಕಾಲದಲ್ಲಿ ಒಂದು ಗುಬ್ಬಚ್ಚಿ ಇತ್ತು. ಅದು ಒಂದು ಕಾಗೆಯ ಜತೆ ಸ್ನೇಹ ಬೆಳಸಿತು. ಒಂದು ದಿನ ಅವೆರಡೂ ಆಹಾರ ಹುಡುಕಿಕೊಂಡು ಹೊರಟಿದ್ದಾಗ, ಒಂದು ಕಡೆ ಕಾಗೆಗೆ ಯಾರೋ ಚಾಪೆಯ ಮೇಲೆ ಒಣಹಾಕಿದ್ದ ಒಂದಿಷ್ಟು ಕೆಂಪು ಮೆಣಸಿನಕಾಯಿ ಕಾಣಿಸಿತು. ಕಾಗೆ ಹೇಳಿತು, "ಅಲ್ಲಿ ನೋಡು, ಆ ಕೆಂಪು ಮೆಣಸಿನಕಾಯಿ. ನಮ್ಮಿಬ್ಬರಲ್ಲಿ ಯಾರು ಹೆಚ್ಚು ತಿಂತಾರೆ, ನೋಡೋಣ ಬಾ."

"ಆಗಲಿ," ಅಂದಿತು ಗುಬ್ಬಚ್ಚಿ.

"ಆಮೇಲೆ, ಗೆದ್ದವರು ಸೋತವರನ್ನು ತಿನ್ನೋದು. ಸರಿಯಾ?"

ಗುಬ್ಬಚ್ಚಿ ನಗುತ್ತ ಒಪ್ಪಿಕೊಂಡಿತು. ಸ್ನೇಹಿತರು ಎಲ್ಲಾದರೂ ಒಬ್ಬರನ್ನೊಬ್ಬರು ತಿನ್ನುವುದುಂಟೆ? ಕಾಗೆ ಹಾಸ್ಯಕ್ಕೆ ಹಾಗೆ ಹೇಳುತ್ತಿದೆ ಎಂದು ಅದು ಅಂದುಕೊಂಡಿತು.

ಗುಬ್ಬಚ್ಚಿ ಒಂದೊಂದು ಮೆಣಸಿನಕಾಯಿಯನ್ನೂ ಧರ್ಮದಿಂದ ತಿಂದಿತು. ಆದರೆ ಕಾಗೆ ಮೋಸ ಮಾಡಿತು. ಒಂದು ಮೆಣಸಿನಕಾಯಿ ತಿನ್ನುವುದು, ಗುಬ್ಬಚ್ಚಿಗೆ ಕಾಣವ ಹಾಗೆ ಮೂರನ್ನು ಚಾಪೆಯ ಕೆಳಗೆ ಬಚ್ಚಿಡುವುದು—ಹೀಗೆ ಮಾಡಿತು.

ತಿಂದದ್ದು ಮುಗಿದ ಮೇಲೆ "ನಾನು ಗೆದ್ದೆ, ನೀನು ಸೋತೆ, ಈಗ ನಿನ್ನನ್ನು ತಿಂದುಹಾಕ್ತೀನಿ" ಅಂದಿತು ಕಾಗೆ.

ಕಾಗೆ ಆಡುತ್ತಿರುವುದು ನಿಜ ಎಂದು ಆಗ ಗುಬ್ಬಚ್ಚಿಗೆ ಅರ್ಥವಾಯಿತು. "ಆಗಲಿ, ಮಾತಿಗೆ ತಪ್ಪುವುದಿಲ್ಲ. ಆದರೆ ನೀನು ಕೊಳಕ, ಹೊರೆಹೊರೆ ಹೊಲಸು ತಿಂತಿ ಅಂತ ಎಲ್ಲರಿಗೂ ಗೊತ್ತು. ಆದ್ದರಿಂದ ನನ್ನನ್ನು ತಿನ್ನುವ ಮೊದಲು, ಹೋಗಿ ಕೊಕ್ಕು ತೊಳೆದುಕೊಂಡು ಬರಬೇಕು," ಅಂದಿತು ಗುಬ್ಬಚ್ಚಿ.

ಕಾಗೆ ಹೊಳೆಯ ಹತ್ತಿರ ಹೋಗಿ ಅರಚಿತು:

"ಹೊಳೆಯೇ, ಹೊಳೆಯೇ,
ನನಗಷ್ಟು ನೀರು ಕೊಡು.
ಕೊಕ್ಕು ತೊಳಕೊಂಡು ಸ್ವಚ್ಛವಾಗಿ
ಗುಬ್ಬಚ್ಚೀನ ತಿನ್ನಬೇಕು."

ಹೊಳೆ ಹೇಳಿತು, "ನೀರು ಬೇಕೆ? ಒಳ್ಳೇದು. ಆದರೆ ನೀನು ಹೊಲಸು ತಿಂತಿ ಅಂತ ಎಲ್ಲರಿಗೂ ಗೊತ್ತು. ಹೋಗಿ ಒಂದು ಮಡಕೆ ತೊಗೊಂಡುಬಾ. ಅದರಲ್ಲಿ ಎಷ್ಟು ಬೇಕಾದರೂ ನೀರು ತೊಗೊ."





ಕಾಗೆ ಊರ ಕುಂಬಾರನ ಪತ್ತಿರ ಹೋಗಿ ಅರಚಿತು:

"ಕುಂಬಾರಣ್ಣ, ಕುಂಬಾರಣ್ಣ,
ನನಗೊಂದು ಮಡಕೆ ಮಾಡಿಕೊಡು.
ಅದರಲ್ಲಿ ನೀರು ಮೊಗೆದು
ಕೊಕ್ಕು ತೊಳಕೊಂಡು ಸ್ವಚ್ಛವಾಗಿ
ಗುಬ್ಬಚ್ಚೀನ ತಿನ್ನಬೇಕು."

ಕುಂಬಾರ ಹೇಳಿದ, "ಮಡಕೆ ಬೇಕೊ? ಆಗಲಿ. ಆದರೆ ನನ್ನ ಪತ್ತಿರ ಮಣ್ಣಿಲ್ಲೆ. ಒಂದಿಷ್ಟು ಮಣ್ಣು ತಾ, ಮಡಕೆ ಮಾಡಿಕೊಡ್ತೀನಿ."

ಕಾಗೆ ಹೊಲಕ್ಕೆ ಹೋಗಿ, ಕೊಕ್ಕಿನಿಂದ ಮಣ್ಣು ಬಗೆಯತೊಡಗಿತು. ಆಗ ಹೊಲ ಹೇಳಿತು, "ನೀನು ಹೊಲಸು ತಿಂತಿ ಅಂತ ಇಡೀ ಜಗತ್ತಿಗೇ ಗೊತ್ತು. ಗುದ್ದಲಿ ತಂದು ಕೆತ್ತಿಕೊಳ್ಳೋದಾದರೆ ಕೊಡ್ತೀನಿ."

ಕಾಗೆ ಚಕ್ರ ತಿರುವುತ್ತ ಕುಳಿತಿದ್ದ ಊರ ಕಮ್ಮಾರನ ಪತ್ತಿರ ಹೋಗಿ ಹೇಳಿತು:

"ಕಮ್ಮಾರಣ್ಣ, ಕಮ್ಮಾರಣ್ಣ,
ನನಗೊಂದು ಗುದ್ದಲಿ ಮಾಡಿಕೊಡು.
ಗುದ್ದಲೀಲಿ ಮಣ್ಣು ಕೆತ್ತಿ,
ಮಣ್ಣಲ್ಲಿ ಮಡಕೆ ಮಾಡಿಸಿ
ಮಡಕೇಲಿ ನೀರು ಮೊಗೆದು
ಕೊಕ್ಕು ತೊಳಕೊಂಡು ಸ್ವಚ್ಛವಾಗಿ
ಗುಬ್ಬಚ್ಚೀನ ತಿನ್ನಬೇಕು."

ಕಮ್ಮಾರ ಹೇಳಿದ, "ಗುದ್ದಲಿ ಬೇಕೆ? ಒಳ್ಳೇದು. ಆದರೆ ಕುಲಿಮೇಲಿ ಬೆಂಕಿ ಇಲ್ಲ. ಗುದ್ದಲಿ ಬೇಕಾದರೆ ಹೋಗಿ ಕೊಂಚ ಬೆಂಕಿ ತೊಗೊಂಡು ಬಾ."

ಕಾಗೆ ಹತ್ತಿರದಲ್ಲೇ ಇದ್ದ ರೈತನ ಮನೆಗೆ ಹೋಯಿತು. ರೈತನ ಹೆಂಡತಿ ಅನ್ನ ಬೇಯಿಸುತ್ತ ಕುಳಿತಿದ್ದಳು ಕಾಗೆ ಅರಚಿತು:

"ಅವ್ವ, ಅವ್ವ,
ನನಗಷ್ಟು ಬೆಂಕಿ ಕೊಡು.



ಬೆಂಕಿ ಕೊಟ್ಟು ಗುದ್ದಲಿ ಮಾಡಿಸಿ,
ಗುದ್ದಲೀಲಿ ಮಣ್ಣು ಕೆತ್ತಿ
ಮಣ್ಣಲ್ಲಿ ಮಡಕೆ ಮಾಡಿಸಿ
ಮಡಕೇಲಿ ನೀರು ಮೊಗೆದು
ಕೊಕ್ಕು ತೊಳಕೊಂಡು ಸ್ವಚ್ಛವಾಗಿ
ಗುಬ್ಬಚ್ಚೀನ ತಿನ್ನಬೇಕು."

ರೈತನ ಹೆಂಡತಿ ಹೇಳಿದಳು, "ಬೆಂಕಿ ಬೇಕೆ? ಒಳ್ಳೇದು. ಆದರೆ ಹೇಗೆ ತೊಗೊಂಡು ಹೋಗ್ತಿ?"

"ನನ್ನ ಬೆನ್ನಿನ ಮೇಲಿಡು," ಅಂದಿತು ಕಾಗೆ.

ರೈತನ ಹೆಂಡತಿ ಬೆಂಕಿಯ ಕೆಂಡ ಎತ್ತಿ ಕಾಗೆಯ ಬೆನ್ನಿನ ಮೇಲೆ ಇಟ್ಟಳು. ತಕ್ಷಣ ಅದರ ರೆಕ್ಕೆಪುಕ್ಕಗಳೆಲ್ಲ ಉರಿದುಹೋದುವು. ಹೊಟ್ಟೆಬಾಕ ಕಾಗೆ ಸುಟ್ಟು ಬೂದಿಯಾಯಿತು. ಆದರೆ ಧರ್ಮದಿಂದ ನಡೆದುಕೊಂಡ ಗುಬ್ಬಚ್ಚಿ ಬಹುಕಾಲ ಬಾಳಿತು.

ಹೇಳಿದವರು: **ಅಷ್ರಫ್ ಸಿದ್ದಿಕಿ**

ಭಾರತ

# ದೊರೆ ಸ್ವರ್ಗಕ್ಕೆ ಹೋದ

ಒಂದಾನೊಂದು ಕಾಲದಲ್ಲಿ ಒಬ್ಬ ಬೊಜ್ಜು ಮೈಯಿನ ಮೂರ್ಖ ದೊರೆಯಿದ್ದ. ಅವನಿಗೆ ಒಬ್ಬ ಸಣಕಲ ಮಾತಿನ ಮಲ್ಲ ಮಂತ್ರಿಯಿದ್ದ. ಮಂತ್ರಿ ಅವಕಾಶ ಸಿಕ್ಕಿದಾಗೆಲ್ಲ ತನ್ನ ಚತುರತೆಯನ್ನು ತೋರಿಸದೆ ಬಿಡುತ್ತಿರಲಿಲ್ಲ. ಬರುಬರುತ್ತ. ದೊರೆ ಎಲ್ಲದಕ್ಕೂ ಮಂತ್ರಿಯನ್ನೇ ಅವಲಂಬಿಸುವ ಹಾಗಾಯಿತು.

ದೊರೆ ಆಗಾಗ ಮಂತ್ರಿಗೆ "ನೀನು ನಮ್ಮನ್ನು ಬಿಟ್ಟುಹೋಗುವುದಿಲ್ಲ ಅಂತ ಮಾತುಕೊಡು" ಎಂದು ಅನ್ನುತ್ತಿದ್ದ. ಮಂತ್ರಿ ಅದಕ್ಕೆ "ಇಲ್ಲ, ಮಹಾಪ್ರಭು. ನೀವು ಎಲ್ಲೇ ಇರಲಿ, ಸ್ವರ್ಗದಲ್ಲಿರಲಿ, ನರಕದಲ್ಲಿರಲಿ, ನಾನು ಸದಾ ನಿಮ್ಮ ಜತೆ ಇರುತ್ತೇನೆ" ಎಂದು ಉತ್ತರಿಸುತ್ತಿದ್ದ. ಅದನ್ನು ಕೇಳಿ ದೊರೆಗೆ ತುಂಬ ಸಂತೋಷವಾಗುತ್ತಿತ್ತು.

ಒಂದು ದಿನ ಸಂಜೆ. ದೊರೆ ನದಿಯ ದಂಡೆಯ ಮೇಲೆ ಸುತ್ತಾಡಿ ಅರಮನೆಗೆ ಹಿಂದಿರುಗುತ್ತಿದ್ದ. ಎಂದಿನಂತೆ ಮಂತ್ರಿ ಅವನ ಜತೆಯಲ್ಲಿದ್ದ. ಇದ್ದಕ್ಕಿದ್ದಂತೆ ಹತ್ತಿರದ ಕಾಡಿನಿಂದ ನರಿಗಳು ಕೂಗುವ ಶಬ್ದ ಕೇಳಿಸಿತು. ದೊರೆಗೆ ಕುತೂಹಲವಾಯಿತು. ಅವನು ಮಂತ್ರಿಯ ಕಡೆ ತಿರುಗಿ ಕೇಳಿದ, "ನಾವು ಕಿವಿ ತೆರೆದು ಕೊಂಡಿರುವಾಗಲೇ ಇಷ್ಟೊಂದು ನರಿಗಳು ಹೀಗೇಕೆ ಕೂಗುತ್ತಿವೆ?"



ಮಂತ್ರಿ ಹೇಳಿದ, "ಮಹಾಪ್ರಭು, ಈ ಸಲದ್ದು ತುಂಬ ಚಳಿಯ ಮಾಗಿ ಅಂತ ನೀವು ಬಲ್ಲಿರಿ. ಪಾಪ! ಆ ಬಡ ನರಿಗಳಿಗೆ ಹೊದಿಯಲು ಬೆಚ್ಚನೆಯ ಬಟ್ಟೆಯಿಲ್ಲ. ಕಂಬಳಿ ಕೊಡಿ ಅಂತ ನಿಮ್ಮನ್ನ ಬೇಡುತ್ತಿವೆ."

"ಹಾಗೋ! ನೀನೆಷ್ಟು ಬುದ್ಧಿವಂತ. ನರಿಗಳ ಭಾಷೆಯನ್ನು ಸಹ ಅರ್ಥ ಮಾಡಿಕೊಳ್ಳುವಷ್ಟು ಚತುರ ನೀನು! ಆದರೆ ಅವಕ್ಕೆ ಕಂಬಳಿ ಯಾಕಿಲ್ಲ?"

"ತಪ್ಪು ಆಸ್ಥಾನದ ಪಾರುಪತ್ಯಗಾರನದು, ಪ್ರಭು," ಮಂತ್ರಿ ಹೇಳಿದ. ಅವನಿಗೆ ಆಸ್ಥಾನದ ಪಾರುಪತ್ಯ ಗಾರನ ಮೇಲೆ ದ್ವೇಷವಿತ್ತು.

"ನಾಚಿಕೆಗೇಡು! ಪಾರುಪತ್ಯಗಾರ ನಮ್ಮ ಮುದ್ದಿನ ನರಿಗಳಿಗೆ ಕಂಬಳಿಯಿಲ್ಲದಂತೆ ಮಾಡಿದ್ದಾನಲ್ಲ! ಅವನನ್ನು ಕಂಬಳಿಯಲ್ಲೇ ಕಟ್ಟಿ, ಸಮುದ್ರಕ್ಕೆ ತಳ್ಳಿಸು. ಆಮೇಲೆ ನೂರು ಕಂಬಳಿ ಕೊಂಡು ನಮ್ಮ ಈ ಮಿತ್ರ ನರಿಗಳಿಗೆ ಹಂಚಿಸು," ಎಂದು ದೊರೆ ಅಪ್ಪಣೆ ಮಾಡಿದ.

ಮಂತ್ರಿ ಆ ಕ್ಷಣ ದೊರೆಯ ಅಪ್ಪಣೆಯನ್ನು ನೆರವೇರಿಸಿದ—ಆದರೆ ಅದರ ಮೊದಲ ಅರ್ಧವನ್ನು ಮಾತ್ರ. ಪಾರುಪತ್ಯಗಾರನನ್ನೇನೋ ಸಮುದ್ರಕ್ಕೆ ತಳ್ಳಿಸಿದ. ಆದರೆ ಖಜಾನೆಯಿಂದ ಕಂಬಳಿಗೆಂದು ತೆಗೆದ ಹಣವನ್ನು ಜೇಬಿಗೆ ಸೇರಿಸಿದ.

ಮಾರನೆಯ ದಿನ ಸಂಜೆ ಮತ್ತೆ ದೊರೆಗೆ ನರಿಗಳು ಕೂಗುವುದು ಕೇಳಿಸಿತು. ಅವನಿಗೆ ಆಶ್ಚರ್ಯ ವಾಯಿತು. "ಏನು ಸಮಾಚಾರ? ಅವು ಇನ್ನೂ ಯಾಕೆ ಬೊಗಳುತ್ತಿವೆ?" ಎಂದು ಕೇಳಿದ.

"ಮಂತ್ರಿ ನಗುತ್ತ ಹೇಳಿದ, ಅವು ನಿಮಗೆ ಕೃತಜ್ಞತೆ ಸಲ್ಲಿಸುತ್ತಿವೆ, ಪ್ರಭು."



"ಅದ್ಭುತ! ಅದ್ಭುತ! ನಿನ್ನಂತಹ ಬುದ್ಧಿವಂತ ಮಂತ್ರಿ ಯಾವ ದೊರೆಗೂ ಇಲ್ಲ. ನೀನು ಎಂದೆಂದಿಗೂ ನಮ್ಮನ್ನು ಬಿಟ್ಟು ಹೋಗುವುದಿಲ್ಲ ಅಂತ ಮಾತು ಕೊಡು," ಅಂದ ದೊರೆ.

ಮಂತ್ರಿ ಧೈರ್ಯ ಹೇಳಿದ, "ಎಂದೆಂದಿಗೂ ಇಲ್ಲ, ಪ್ರಭು, ನೀವು ಸ್ವರ್ಗದಲ್ಲಿರಲಿ, ನರಕದಲ್ಲಿರಲಿ, ನಾನು ನಿಮ್ಮ ಬದಿಯಲ್ಲೇ ಇರುತ್ತೇನೆ."

ದೊರೆಗೆ ತುಂಬ ಸಂತೋಷವಾಯಿತು. ಆದರೆ ಆ ಸಂತೋಷ ಬಹುಕಾಲ ಉಳಿಯಲಿಲ್ಲ. ಇದ್ದಕ್ಕಿದ್ದಂತೆ ಕಾಡಿನ ಕಡೆಯಿಂದ ಒಂದು ಹಂದಿ ಓಡಿ ಬಂದಿತು. ದೊರೆ ಹಿಂದೆಂದೂ ಹಂದಿಯ ಮುಖ ಕಂಡಿರಲಿಲ್ಲ. "ಅಯ್ಯೋ ದೇವರೇ! ಇದು ಯಾವ ಪ್ರಾಣಿ?" ಎಂದು ಅವನು ಅರಚಿದ.

ಮಂತ್ರಿಗೆ ಅದು ಏನೆಂದು ಗೊತ್ತಿತ್ತು. ಅವನು ಶಾಂತವಾಗಿ ಉತ್ತರಿಸಿದ, "ಇದು ನಿಮ್ಮ ಗಜಶಾಲೆಯ ಆನೆ ಪ್ರಭು. ಅರಮನೆಯ ಕಾಸ್ದಾರ ಇದಕ್ಕೆ ಸರಿಯಾಗಿ ಹೊಟ್ಟೆಗೆ ಹಾಕುತ್ತಿಲ್ಲ. ಅದಕ್ಕೇ ಇದು ಹೀಗೆ ಬಡಕಲಾಗಿದೆ."

ದೊರೆಗೆ ಕೋಪ ಬಂತು. ಕಾಸ್ದಾರನನ್ನು ಕೂಡಲೇ ಗಲ್ಲಿಗೇರಿಸುವಂತೆ ಅಪ್ಪಣೆ ಮಾಡಿದ. ಖಜಾನೆಯಿಂದ ಎಷ್ಟು ಬೇಕೋ ಅಷ್ಟು ಹಣ ತೆಗೆದು ಆ ಬಡ ಪ್ರಾಣಿಗೆ ಆಹಾರ ಹಾಕುವಂತೆ ಹೇಳಿದ.

ಮಂತ್ರಿ ಖಜಾನೆಯಿಂದ ಸಾಕಷ್ಟು ಹಣ ತೆಗೆದು ಜೇಬಿಗೆ ಸೇರಿಸಿದನೆಂದು ಬೇರೆ ಹೇಳಬೇಕೆ!

ತಿಂಗಳು ಕಳೆಯಿತು. ಒಂದು ದಿನ ಸಂಜೆ ದೊರೆ ಗಾಳಿಸವಾರಿ ಮುಗಿಸಿ ಮಂತ್ರಿಯ ಜತೆ ಹಿಂದಿರುಗುತ್ತಿದ್ದಾಗ ಮತ್ತೆ ಅದೇ ಹಂದಿ ಅವನ ಕಣ್ಣಿಗೆ ಬಿದ್ದಿತು. ಅವನು ಆಶ್ಚರ್ಯದಿಂದ ಮಂತ್ರಿಯನ್ನು ಕೇಳಿದ, "ನಾವು ಅವತ್ತು ನೋಡಿದ ಹಸಿದ ಆನೆಯೇ ಇದು? ಆದರೆ ಇದು ಇನ್ನೂ ಯಾಕೆ ದಪ್ಪವಾಗಿಲ್ಲ?"

ಮಂತ್ರಿ ದೊಡ್ಡದಾಗಿ ಹಲ್ಲು ಕಿರಿದು, "ಇಲ್ಲ ಮಹಾಸ್ವಾಮಿ. ಆ ಆನೆ ಈಗ ಪ್ರಭುಗಳಷ್ಟೇ ದುಂಡಗಾಗಿದೆ. ಈ ಪ್ರಾಣಿ ಬರಿಯ ಇಲಿ, ಅಷ್ಟೆ. ಅರಮನೆಯ ಪಾಕಶಾಲೆಯಲ್ಲಿ ತಿಂದು ತಿಂದು ಹೀಗೆ ಕೊಬ್ಬಿದೆ. ನಮ್ಮ ಅಡಿಗೆಭಟ್ಟ ಎಷ್ಟು ಅಜಾಗರೂಕ ಎಂದು ಇದು ತೋರಿಸುತ್ತದೆ."

ದೊರೆಯ ದುಂಡನೆಯ ಪೆದ್ದ ಮುಖ ಹಣ್ಣಾದ ದೊಣ್ಣಮೆಣಸಿನ ಕಾಯಿಯಂತೆ ಕೆಂಪಾಯಿತು. ಅವನು ಕಣ್ಣು ಹೊರಳಾಡಿಸುತ್ತ ಗೊಣಗಿದ. "ಅನ್ಯಾಯ! ಅನ್ಯಾಯ! ಅಡಿಗೆ ಭಟ್ಟನ ಅಜಾಗರೂಕತೆಯಿಂದಾಗಿ ಇಲಿ ನಮ್ಮ ಆಹಾರ ತಿಂದುಹಾಕುವುದೆಂದರೇನು? ಇವತ್ತಿನ ಅಡಿಗೆಯಾದ ಮೇಲೆ ಅಡಿಗೆ ಭಟ್ಟನನ್ನು ಗಲ್ಲಿಗೆ ಹಾಕಿಸು," ಎಂದು ಅಪ್ಪಣೆ ಮಾಡಿದ.

ಆ ರಾತ್ರಿ ಅಡಿಗೆಭಟ್ಟ ಗುಟ್ಟಾಗಿ ಮಂತ್ರಿಯ ಬಳಿ ಬಂದು, ಕೈತುಂಬ ಹಣ ಕೊಟ್ಟು, ಕಾಲಿಗೆ ಬಿದ್ದು, ತನ್ನ ಜೀವ ಉಳಿಸಿದ್ದಾದರೆ ಮುಂದೆ ದೊರೆಗೆ ಮಾಡುವ ಪ್ರತಿ ಭಕ್ಷಭೋಜ್ಯದಲ್ಲಿಯೂ ಒಂದು ಪಾಲನ್ನು ಅವನಿಗೆ ಕಳಿಸಿಕೊಡುವುದಾಗಿ ಮಾತುಕೊಟ್ಟ.

ಮಂತ್ರಿಗೆ ಸಂತೋಷವಾಯಿತು. "ನಾನು ನೋಡಿಕೊಳ್ಳುತ್ತೇನೆ, ನೀನು ನಿಶ್ಚಿಂತನಾಗಿರು" ಎಂದು ಭರವಸೆ ಕೊಟ್ಟ.

ನಡುರಾತ್ರಿ ದೊರೆಯ ಸಮ್ಮುಖದಲ್ಲಿ ಇನ್ನೇನು ಅಡಿಗೆಭಟ್ಟನನ್ನು ಗಲ್ಲಿಗೆ ಹಾಕಬೇಕು, ಆಗ ಮಂತ್ರಿ "ತಾಳಿ, ತಾಳಿ" ಎಂದು ಕೂಗುತ್ತ ಓಡಿಬಂದ.

"ಮಹಾಪ್ರಭು, ನಾನು ಈಗ ತಾನೇ ಪಂಚಾಂಗ ನೋಡಿ ಬಂದಿದ್ದೀನಿ. ಇದು ತುಂಬ ಶುಭವೇಳೆ. ಈ ವೇಳೆಯಲ್ಲಿ ನೇಣಾದವನು ನೇರವಾಗಿ ಸ್ವರ್ಗಕ್ಕೆ ಹೋಗುತ್ತಾನೆ. ಈಗ ಅಡಿಗೆಭಟ್ಟನಿಗೆ ನೇಣುಹಾಕಿದರೆ ಅದು ಶಿಕ್ಷೆಯಾಗುವುದಿಲ್ಲ, ಸನ್ಮಾನವಾಗುತ್ತದೆ. ಈ ಕೊರಮ ಸ್ವರ್ಗಕ್ಕೆ ಯಾಕೆ ಹೋಗಬೇಕು?"

ದೊರೆ ಸಂತೋಷದಿಂದ ಕುಣಿಯುತ್ತ ಹೇಳಿದ, "ಸ್ವರ್ಗ ! ನನಗೆ ಬಹಳ ದಿನಗಳಿಂದ ಸ್ವರ್ಗ ನೋಡುವ ಆಸೆಯಿದೆ. ಅಡಿಗೆಭಟ್ಟನ ಬದಲು ನನಗೆ ನೇಣು ಹಾಕಿ. ಅದರಿಂದ ನನಗೆ ಸ್ವರ್ಗ ನೋಡುವ ಅವಕಾಶ ಸಿಗುತ್ತೆ. ಆದರೆ ಸ್ವಲ್ಪ ತಾಳಿ." ದೊರೆ ಮಂತ್ರಿಯ ಕಡೆ ತಿರುಗಿ ಹೇಳಿದ, "ಅಯ್ಯಾ, ಆಪ್ತ ಮಿತ್ರ. ನಾನು ಎಲ್ಲಿ ಹೋದರೂ ನನ್ನ ಜತೆ ಬರುವುದಾಗಿ ಹೇಳುತ್ತಿದ್ದೆಯಲ್ಲ, ಈಗ ನಾನು ಸ್ವರ್ಗಕ್ಕೆ ಹೊರಟಿದೀನಿ. ನೀನು ಮುಂದೆ ನಡೆದು ದಾರಿ ತೋರಿಸು" ಎನ್ನುತ್ತ ಗಲ್ಲಿನಾಳಿಗೆ ಮೊದಲು ಮಂತ್ರಿಗೆ ನೇಣು ಹಾಕುವಂತೆ ಅಪ್ಪಣೆ ಮಾಡಿದ.

ಗಾಬರಿಗೊಂಡ ಮಂತ್ರಿ ಬಾಯಿ ತೆರೆಯುವ ಮೊದಲೇ ಪಹರೆಯವರು ಅವನ ತಲೆಗೆ ಕುಣಿಕೆ, ತೊಡಿಸಿದರು, ಗಲ್ಲಿನಾಳು ಹಗ್ಗ ಎಳೆದ. ಮಂತ್ರಿಯ ದೇಹ ಮೇಲೆ ತೂಗಾಡತೊಡಗಿತು. ತನ್ನ ಅಪ್ಪಣೆ ಆ ಕೂಡಲೇ ನೆರವೇರಿದುದನ್ನು ಕಂಡು ದೊರೆಗೆ ಸಂತೋಷವಾಯಿತು.



ಗಲ್ಲಿನಾಳು ದೊರೆಗೂ ಅದೇ ಗತಿ ಕಾಣಿಸಿದ. ಎಷ್ಟೇ ಆವರೂ, ದೊರೆಯೇ ಅದಕ್ಕೆ ಆಸೆಪಟ್ಟಿದ್ದ ನಲ್ಲವೆ!

ಅವರಿಬ್ಬರೂ ಸ್ವರ್ಗ ಸೇರಿದರೊ ಇಲ್ಲವೊ ನಮಗೆ ತಿಳಿಯದು.

ಹೇಳಿದವರು: **ಮನೋಜ್ ದಾಸ್**
ಚಿತ್ರರಚನೆ: **ವಿಕಿ ಪಟೇಲ್**





ಇರಾನ್

## ಮಿತ್ರ ಮತ್ತು ಶತ್ರು

ಹಿಂದಿನ ಕಾಲದಲ್ಲಿ ಒಬ್ಬ ಮನುಷ್ಯನಿದ್ದ. ಅವನು ತುಂಬ ಸತ್ಯವಂತ. ದಯಾಳು. ಅಪ್ಪ ಉದಾರಿಯಾಗಿದ್ದು ಎಲ್ಲರ ಜತೆ ಸ್ನೇಹದಿಂದ ಇರುತ್ತಿದ್ದ ಕಾರಣ ಜನ ಅವನನ್ನು 'ಮಿತ್ರ' ನೆಂದೇ ಕರೆಯುತ್ತಿದ್ದರು. ಒಂದು ದಿನ ಅವನು ತನ್ನಲ್ಲಿ ಇದ್ದದ್ದನ್ನೆಲ್ಲ ಮಾರಿ, ಒಂದು ಒಳ್ಳೆಯ ಕುದುರೆ ಕೊಂಡುಕೊಂಡ, ಅದಕ್ಕೆ ಜೀನು ಕಟ್ಟಿದ. ಅದರ ಮೇಲೆ ತನ್ನ ಆಹಾರ, ದಿನನಿತ್ಯದ ಸಾಮಾನುಗಳನ್ನು ಹೇರಿ, ಅಲ್ಲಾನ ಹೆಸರು ಹೇಳುತ್ತ ಊರು ಬಿಟ್ಟು ಹೊರಟ.

ಕೊಂಚ ದೂರ ಹೋಗುವಷ್ಟರಲ್ಲಿ ಹಿಂದಿನಿಂದ ಇನ್ನೊಬ್ಬ ಕುದುರೆ ಹತ್ತಿ ಬರುತ್ತಿದ್ದುದು ಕಾಣಿಸಿತು. ಮಿತ್ರ ಆ ಅಪರಿಚಿತ ಹತ್ತಿರ ಬರುವವರೆಗೂ ಕಾದಿದ್ದು ಅವನಿಗೆ ಸಲಾಮು ಮಾಡಿ ಹೆಸರು ಕೇಳಿದ.

"ನನ್ನ ಹೆಸರು 'ಶತ್ರು'," ಎಂದು ಅಪರಿಚಿತ ಹೇಳಿದ.

"ಎಂಥ ಕೆಟ್ಟ ಹೆಸರು!" ಮಿತ್ರ ಆಶ್ಚರ್ಯದಿಂದ ಹೇಳಿದ. "ನಿನಗೆ ಆ ಹೆಸರನ್ನು ಯಾರು ಇಟ್ಟರು?"

"ಆ ಹೆಸರು ಇಟ್ಟವರು ನಮ್ಮ ಅಪ್ಪ ಅಮ್ಮ. ಎಲ್ಲರೂ ನನ್ನನ್ನು ಶತ್ರುವೆಂದೇ ಕರೆಯುತ್ತಾರೆ. ನಾನೇನು ಮಾಡಲಿ? ಅಂದಹಾಗೆ ನಿನ್ನ ಹೆಸರು?"

"ನನ್ನ ಹೆಸರು 'ಮಿತ್ರ'."

ಮಿತ್ರ, ಶತ್ರು ಇಬ್ಬರೂ ಒಟ್ಟಿಗೆ ಪ್ರಯಾಣ ಮಾಡುವುದೆಂದು ತೀರ್ಮಾನಿಸಿ, ಸವಾರಿ ಮಾಡುತ್ತ ಹೊರಟರು. ದಾರಿಯಲ್ಲಿ ಒಂದು ತಿಳಿನೀರಿನ ಊಟೆ ಕಂಡಿತು. ಊಟೆಯ ಬದಿಯಲ್ಲಿ ಒಂದು ಮರ ವಿತ್ತು. ಮರದ ನೆರಳಿನಿಂದ ಆಗ ನಡುಹಗಲಾಗಿದೆಯೆಂದು ತಿಳಿಯಿತು. ಇಬ್ಬರೂ ಅಲ್ಲಿಯೇ ಇಳಿದು ಊಟ ಮಾಡುವುದೆಂದು ನಿಶ್ಚಯಿಸಿದರು.

ಶತ್ರು ಹೇಳಿದ, "ಈಗ ನಾವು ಸಹಪ್ರಯಾಣಿಕರು. ನಮ್ಮ ನಮ್ಮ ಊಟಗಳನ್ನು ಹಂಚಿ ತಿನ್ನೋಣ. ಇಬ್ಬರ ಚೀಲವನ್ನೂ ಒಟ್ಟಿಗೆ ಬಿಚ್ಚುವುದೇಕೆ? ಮೊದಲು ನಿನ್ನ ಚೀಲದಿಂದ ಷುರು ಮಾಡೋಣ. ಅದು ಮುಗಿದ ಮೇಲೆ ನನ್ನದನ್ನು ತೆಗೆಯುತ್ತೇನೆ." ಮಿತ್ರನಿಗೆ ಈ ಸಲಹೆ ಒಡಿಸಿತು. ಜೀನಿನ ಚೀಲ ಬಿಚ್ಚಿ, ತನ್ನ ಆಹಾರ ಪಾನೀಯಗಳನ್ನು ಶತ್ರುವಿನ ಜತೆ ಹಂಚಿಕೊಂಡ. ಕೆಲವು ದಿನಗಳವರೆಗೆ ಅವರು ಹೀಗೆಯೇ ಮಿತ್ರನ ಆಹಾರದ ಮೇಲೆ ಪ್ರವಾಸ ಮಾಡಿದರು. ಕೊನೆಗೆ ಅವನ ಆಹಾರ ಬರಿದಾಯಿತು.

ಈಗ ಶತ್ರುವಿಗೆ ತನ್ನದನ್ನು ಮಿತ್ರನೊಂದಿಗೆ ಹಂಚಿ ತಿನ್ನುವ ಸರದಿ ಬಂದಿತು. ಊಟದ ಹೊತ್ತು ಬಂದಾಗ ಶತ್ರು ಕೊಂಚ ದೂರ ಹೋಗಿ ತಾನೊಬ್ಬನೇ ಉಂಡು ಬಂದ. ಮಿತ್ರ ವಿನಯ, ಸಂಕೋಚಗಳ ವ್ಯಕ್ತಿ. ಅವನು ಸುಮ್ಮನಿದ್ದ. ಆದರೆ ಕೊಂಚ ಹೊತ್ತಿನ ಮೇಲೆ ಅವನಿಗೆ ಹಸಿವು. ಬಳಲಿಕೆ ಹೆಚ್ಚಾಯಿತು. ಅವನೆಂದ, "ಹಂಚಿಕೊಂಡು ಉಣ್ಣುವುದಾಗಿ ನಮ್ಮಲ್ಲಿ ಮಾತಾಗಿತ್ತು. ನನ್ನದನ್ನೆಲ್ಲ ನೀನು ತಿಂದೆ. ಈಗ ನೀನು ನಿನ್ನದನ್ನು ಹಂಚಲು ತಯಾರಿಲ್ಲವಲ್ಲ."



ಶತ್ರು ಹೇಳಿದ, "ನಾನು ವಿವೇಕಿ. ನಮ್ಮದು ಎಷ್ಟು ದಿನಗಳ ಪ್ರಯಾಣವೋ ಏನೋ. ನನ್ನದನ್ನು ಹಂಚಿ ಕೊಟ್ಟರೆ ಬೇಗ ಮುಗಿದುಹೋಗುತ್ತೆ. ಆಗ ನಾನೂ ಹಸಿದಿರಬೇಕಾಗುತ್ತೆ. ನನ್ನದನ್ನು ನಾನೊಬ್ಬನೇ ತಿಂದರೆ ಹೇಗೂ ಜೀವಸಹಿತ ಇರಬಹುದು."

"ಹಾಗೊ! ಹಾಗಿದ್ದರೆ ನಾವು ಯಾಕೆ ಒಟ್ಟಿಗೆ ಪ್ರಯಾಣ ಮಾಡಬೇಕು." ಮಿತ್ರಹೇಳಿದ. ಮುಂದಿನ ದಾರಿಕವಲಿನಲ್ಲಿ ಅವರು ಬೇರೆಬೇರೆಯಾದರು. ಮಿತ್ರ ಕೊಂಚ ದೂರ ಸವಾರಿ ಮಾಡಿ, ಕತ್ತಲಾಗುವ ಹೊತ್ತಿಗೆ ಒಂದು ಹಳೆಯ ಗಿರಣಿ ತಲಪಿದ. ಕುದುರೆಯನ್ನು ಬಿಚ್ಚಿ ಮೈದಾನದಲ್ಲಿ ಮೇಯಲು ಬಿಟ್ಟ. ಆ ಪಾಳು ಗಿರಣಿಯಲ್ಲಿ ರಾತ್ರಿ ಕಳೆಯುವುದೆಂದುಕೊಂಡು ಒಳ ಹೊಕ್ಕ. ಅಲ್ಲಿ ಮೂಲೆಯಲ್ಲಿ ಒಂದು ದೊಡ್ಡ ಕಲ್ಲಿತ್ತು. ಅದರ ಹಿಂಬದಿಯ ಜಾಗ ಸುರಕ್ಷಿತವೆನ್ನಿಸಿತು. ಜೇನಿನ ಚೀಲಕ್ಕೆ ಒರಗಿ ನಿದ್ರೆಹೋದ.



ಇದ್ದಕ್ಕಿದ್ದಂತೆ ಯಾವದೋ ಧ್ವನಿ ಕೇಳಿ ಮಿತ್ರ ಎಚ್ಚೆತ್ತ. ಕಲ್ಲಿನ ಮೇಲೆ ಹತ್ತಿ ಇಣಿಕಿ ನೋಡಿದಾಗ ಹೊರಗೆ ಬೆಳ್ದಿಂಗಳಲ್ಲಿ ಒಂದು ಸಿಂಹ, ಹುಲಿ, ತೋಳ, ನರಿಗಳು ಮಾತಾಡುತ್ತ ಕುಳಿತಿದ್ದವು.

"ನನ್ನ ಮೂಗಿಗೆ ಮನುಷ್ಯನ ವಾಸನೆ ಬಡಿಯುತ್ತಿದೆ," ಅಂದಿತು ಸಿಂಹ. ಅದನ್ನು ಕೇಳಿ ಮಿತ್ರನಿಗೆ ಜಂಘಾಬಲವೇ ಉಡುಗಿ ಹೋಯಿತು. ಆದರೆ ಹುಲಿ ಹೇಳಿತು, "ಯಾರಿಗೆ ತಾನೆ ಈ ಗಿರಣಿಗೆ ಬರುವ ಧೈರ್ಯ ಇದ್ದೀತು?" ತೋಳ ದನಿಗೂಡಿಸಿತು, "ಇಂಥ ದೆವ್ವ ಹೊಕ್ಕ ಸ್ಥಳಕ್ಕೆ ಬರೋರಿಗೆ ಹತ್ತೆದೆ ಇರಬೇಕು". ನರಿಯೂ ಆ ಮಾತಿಗೆ ಒಪ್ಪಿ ಹೇಳಿತು, "ಏನೂ ಚಿಂತಿಸಬೇಕಾಗಿಲ್ಲ. ಬನ್ನಿ, ಮಾಮೂಲಿನಂತೆ ನಮ್ಮ ನಮ್ಮ ಕಥೆ ಹೇಳಿಕೊಂಡು ಕೇಳೋಣ."

ಸಿಂಹ ಹೇಳಿತು, "ಇವತ್ತು ನಮಗೆ ಗೊತ್ತಿರೋ ಗುಟ್ಟನ್ನು ಹೇಳೋಣಂತೆ."



ಹುಲಿ ಶುರುಮಾಡಿತು, "ನನಗೊಂದು ಸ್ವಾರಸ್ಯವಾದ ಗುಟ್ಟು ಗೊತ್ತಿದೆ. ಇಲ್ಲಿ, ಇದೇ ಗಿರಣೀಲಿ, ಕೆಲವು ಇಲಿಗಳಿವೆ. ಅವು ಬಂಗಾರದ ನಾಣ್ಯಗಳನ್ನು ಸಂಪಾದಿಸಿಕೊಂಡು ತಂದಿವೆ. ರಾತ್ರಿ, ಚಂದ್ರ ಬೆಳಗುತ್ತಿರುವಾಗ ಅವು ತಮ್ಮ ಸಂಪತ್ತನ್ನು ಹೊರತೆಗೆದು, ಸೂರಿನ ಮೇಲೆ ಹರಡುತ್ತವೆ. ಕುಣಿದು ಕುಪ್ಪಳಿಸುತ್ತ ಫಳಫಳನೆ ಹೊಳೆಯುವ ಬಂಗಾರದ ಜತೆ ಆಡುತ್ತವೆ. ಬೆಳಗಾಗುವ ಹೊತ್ತಿಗೆ ಮತ್ತೆ ಬಿಲದಲ್ಲಿ ಮುಚ್ಚಿಡುತ್ತವೆ."

ಈಗ ತೋಳದ ಸರದಿ ಬಂದಿತು. ಅದು ಹೇಳಿತು. "ನಾನೊಬ್ಬ ದೊರೇನ ಬಲ್ಲೆ. ಅವನ ಮಗಳಿಗೆ ಹುಚ್ಚು ಹಿಡಿದಿದೆ. ದಿನ ಕಳೆದಂತೆ ಮೈತೂಕ ಇಳಿದು ಅವಳು ಸಣ್ಣಗಾಗ್ತಿದಾಳೆ. ಅವಳ ರೋಗಕ್ಕೆ ಒಂದು ಹಸಿರು ಮದ್ದಿದೆ. ಒಬ್ಬ ಕುರುಬ ಅದನ್ನ ಬೆಳೆದು, ಅದರ ಬೇರನ್ನು ತನ್ನ ಕುರಿಗಳಿಗೆ ಮೇವಾಗಿ ಕೊಡ್ತಾನೆ. ಈ ದೇಶದಲ್ಲಿ ಬೇರೆ ಎಲ್ಲೂ ಅಷ್ಟು ಆರೋಗ್ಯವಾದ ಕುರಿಗಳಿಲ್ಲ. ಆ ಬೇರನ್ನ ಹಾಲಿನಲ್ಲಿ ಬೇಯಿಸಿ ಕೊಟ್ಟರೆ ದೊರೆಮಗಳ ರೋಗ ಗುಣವಾಗುತ್ತೆ." ನರಿ ತನ್ನ ಗುಟ್ಟು ಹೇಳಿತು. "ಈ ಗಿರಣಿಗೆ ಒಂದು ಮೈಲಿ ದೂರದಲ್ಲಿ ಒಂದು ಪಾಳು ಜಾಗ ಇದೆ. ಅದರ ಕೆಳಗೆ ಸ್ವಚ್ಛವಾದ ಸಿಹಿನೀರಿನ ಚಿಲುಮೆ ಇದೆ. ಅದು ಕೊಳಕಿನಿಂದ ಮುಚ್ಚಿಹೋಗಿದೆ. ಹಿಂದಿನ ಕಾಲದಲ್ಲಿ ಆ ಚಿಲುಮೇಲಿ ನೀರು ಹರೀತಿದ್ದಾಗ, ಅದರ ಸುತ್ತ ಸುಂದರವಾದ ಹೂಹಣ್ಣುಗಳ ತೋಟವಿತ್ತು. ಈಗ ಆ ಜಾಗ ಬಂಜರಾಗಿದೆ."

ಪ್ರಾಣಿಗಳು ಕಥೆ ಹೇಳಿ ಮುಗಿಸಿ ತಮ್ಮ ತಮ್ಮ ಮನೆ ಸೇರಿಕೊಂಡವು. ಅವು ಹೋದದ್ದು ಖಚಿತವಾದಮೇಲೆ, ಮಿತ್ರ ತಾನು ಅಡಗಿದ್ದ ಸ್ಥಳದಿಂದ ಹೊರಬಂದು ಹುಲಿ ಹೇಳಿದ ಕಥೆ ನಿಜವೇ ಎಂದು ಪರೀಕ್ಷೆ ಮಾಡಿದ. ಮಾಳಿಗೆಯ ಮೇಲೆ ಹತ್ತಿ ನೋಡಿದರೆ ಅಲ್ಲಿ ಬೆಳ್ದಿಂಗಳಲ್ಲಿ ಬಂಗಾರದ ನಾಣ್ಯಗಳು ಬೆಳಗುತ್ತಿದ್ದವು. ಅವುಗಳ ಮಧ್ಯೆ ಇಲಿಗಳು ಸಂತೋಷದಿಂದ ಕುಣಿದಾಡುತ್ತಿದ್ದವು. ಅವುಗಳನ್ನು ಹೆದರಿಸಿ ಅಟ್ಟಲೆಂದು ಮಿತ್ರ ಒಂದು ಸಣ್ಣ ಕಲ್ಲು ಬೀರಿದ. ಅವು ಓಡಿಹೋಗಿ ಬಿಲ ಸೇರಿಕೊಂಡವು. ಮಿತ್ರ ಆ ನಾಣ್ಯಗಳನ್ನು ಆರಿಸಿಕೊಂಡು ಜೇಬಿಗೆ ತುಂಬಿಕೊಂಡ. ಕುದುರೆ ಹತ್ತಿ ರಾತ್ರಿಯ ಉಳಿದರ್ಧವನ್ನು ಕಳೆಯಲೆಂದು ಹತ್ತಿರದ ಹಳ್ಳಿಗೆ ಹೊರಟ.

ಮಾರನೆಯ ದಿನ ಬೆಳಗ್ಗೆ ಎದ್ದು ಹಳ್ಳಿಯ ಹೊರಅಂಚಿಗೆ ಬಂದ. ಅಲ್ಲೊಬ್ಬ ಕುರುಬ ಚೆನ್ನಾಗಿ ಕೊಬ್ಬಿ ಬೆಳೆದ ತನ್ನ ಕುರಿಮಂದೆಯ ನಡುವೆ ಕುಳಿತಿದ್ದ. ಮಿತ್ರನಿಗೆ ತೋಳದ ಕಥೆ ನೆನಪಾಯಿತು. ಅವನು ಕುರುಬನ ಬಳಿ ಹೋಗಿ ಹಸಿರು ಬೇರು ಕೇಳಿದ. ಮೊದಮೊದಲು ಕುರುಬ ಹಿಂಜರಿದ. ಆದರೆ ಮಿತ್ರ ಇಲಿಗಳಿಂದ ಪಡೆದ ಬಂಗಾರದ ನಾಣ್ಯ ತೋರಿಸಿದ ತಕ್ಷಣ ಕುರುಬ ಸಂತೋಷದಿಂದ ತನ್ನ ಅಪರೂಪದ ರಹಸ್ಯದ ಬೇರನ್ನು ಒಂದು ಸ್ವಲ್ಪ ಕೊಟ್ಟ.

ಈಗ ಮಿತ್ರ ನೇರವಾಗಿ ದೊರೆಮಗಳು ರೋಗದಿಂದ ನರಳುತ್ತಿದ್ದ ಪಟ್ಟಣಕ್ಕೆ ಬಂದ. ಅಲ್ಲಿ ಜನರೆಲ್ಲರೂ ದುಃಖದಲ್ಲಿದ್ದರು. ಎಲ್ಲರೂ ತೋಳ ಹೇಳಿದ ಕಥೆಯನ್ನೇ ಹೇಳಿದರು. ಮಿತ್ರ ದೊರೆಮಗಳ ರೋಗವನ್ನು ಗುಣಪಡಿಸಲು ಮುಂದಾದ. ವಿಫಲನಾದರೆ ಸಾವಿನ ಶಿಕ್ಷೆಯಾಗುತ್ತದೆ ಎಂದು ಜನ ಎಚ್ಚರಿಸಿದರು. ಮಿತ್ರ ಹೆದರಲಿಲ್ಲ. ಅವನು ಅರಮನೆಗೆ ಹೋದ. ಅವನನ್ನು ದೊರೆಮಗಳಲ್ಲಿಗೆ ಕರೆದೊಯ್ದರು. ಮಿತ್ರ ಕೊಂಚ ಹಾಲು ತರಿಸಿ, ಅದರಲ್ಲಿ ಮಂತ್ರದ ಬೇರನ್ನು ಬೇಯಿಸಿ ದೊರೆಮಗಳಿಗೆ ಕುಡಿಯಲು ಕೊಟ್ಟ. ಕೆಲವೇ ಗಂಟೆಗಳಲ್ಲಿ ದೊರೆಮಗಳ ಮುಖಕ್ಕೆ ಕಳೆ ಬಂದಿತು. ಅವಳು ಮತ್ತೆ ಆರೋಗ್ಯವಂತಳಾಗಿ ಸುಖಿಯಾದಳು.

ರಾಜ್ಯದಲ್ಲಿ ಎಲ್ಲರಿಗೂ ಆನಂದವೋ ಆನಂದ. ಮಿತ್ರನೂ ದೊರೆಮಗಳೂ ಪರಸ್ಪರ ಪ್ರೇಮಿಸಿ ಮದುವೆಯಾದಾಗ ಆ ಆನಂದ ಇನ್ನೂ ಹೆಚ್ಚಿತು. ದೊರೆಗೆ ಮಕ್ಕಳಿರಲಿಲ್ಲ. ಮಿತ್ರನನ್ನೇ ಯುವರಾಜ ನನ್ನಾಗಿ ಮಾಡಬೇಕೆಂದು ಅವನ ಆಸೆ. ಆದರೆ ಮಿತ್ರನ ಹಂಚಿಕೆಯೇ ಬೇರೆ. ಅವನು ಹೆಂಡತಿಯನ್ನು ನರಿ ಹೇಳಿದ್ದ ಪಾಳು ಜಾಗಕ್ಕೆ ಕೊಂಡೊಯ್ದು, ತಿಳಿನೀರಿನ ಚಿಲುಮೆಯನ್ನು ಅಗೆದು ತೋರಿಸಿದ. ಅಲ್ಲೇ ಒಂದು ಮನೆ ಕಟ್ಟಿದ. ಕೆಲವೇ ವರ್ಷಗಳಲ್ಲಿ ಆ ಸ್ಥಳ ಜಗತ್ತಿನಲ್ಲಿ ಬೇರೆ ಎಲ್ಲೂ ಇರದಂತಹ ಸುಂದರ ಉದ್ಯಾನವಾಯಿತು.

ಚೈತ್ರಮಾಸದ ಒಂದು ದಿನ ಮಿತ್ರ ತನ್ನ ಹೆಂಡತಿ ಮಕ್ಕಳೊಂದಿಗೆ ಉದ್ಯಾನದಲ್ಲಿ ತಿರುಗಾಡುತ್ತಿದ್ದಾಗ ದೂರದಲ್ಲಿ ಒಬ್ಬ ಕುದುರೆಯ ಮೇಲೆ ಬರುತ್ತಿದ್ದುದು ಕಾಣಿಸಿತು. ಹತ್ತಿರ ಬಂದಾಗ ಅವನು ತನ್ನ ಹಳೆಯ ಸಹಪ್ರಯಾಣಿಕ ಶತ್ರುವೆಂದು ಗೊತ್ತಾಯಿತು. ಮಿತ್ರ ಹೀಗೆ ಅಭಿವೃದ್ಧಿಗೆ ಬಂದ ಗುಟ್ಟೇನೆಂದು ಶತ್ರು ಕೇಳಿದ. ಮಿತ್ರ ನಡೆದದ್ದನ್ನೆಲ್ಲ ಹೇಳಿದ. ಮಿತ್ರನ ಅದೃಷ್ಟವನ್ನು ಕಂಡು ಶತ್ರುವಿಗೆ ಹೊಟ್ಟೆ ಉರಿಯಿತು. ತಾನೂ ಆ ಪಾಳು ಗಿರಣಿಗೆ ಹೋಗುವುದೆಂದು ನಿಶ್ಚಯಿಸಿದ. ಪ್ರಾಣಿಗಳಿಂದ ಹೊಸ ಹೊಸ ಗುಟ್ಟು ತಿಳಿಯಬಹುದು, ತಾನೂ ಮಿತ್ರನಂತೆಯೇ ಶ್ರೀಮಂತನಾಗಬಹುದು ಎಂದು ಅವನ ಎಣಿಕೆ.

ಶತ್ರು ಗಿರಣಿಗೆ ಬಂದು ಕಲ್ಲಿನ ಹಿಂದೆ ಮೂಲೆಯಲ್ಲಿ ಅವಿತುಕೊಂಡ. ಸ್ವಲ್ಪ ಹೊತ್ತಿನ ಮೇಲೆ ಮಿತ್ರ ಹೇಳಿದ್ದಂತೆಯೇ ಸಿಂಹ, ಹುಲಿ, ತೋಳ, ನರಿಗಳು ಬಂದವು. ಶತ್ರುವಿಗೆ ಸಂತೋಷವಾಯಿತು. ಆಹಾ ! ಇನ್ನೇನು ಹೊಸಹೊಸ ಗುಟ್ಟುಗಳು ತಿಳಿಯುತ್ತವೆ.

"ಇಲ್ಲೆಲ್ಲೋ ಮನುಷ್ಯನ ವಾಸನೆ ಬರುತ್ತಿದೆ," ಎಂದಿತು ಸಿಂಹ. "ಕಳೆದ ಸಲ ನಮ್ಮ ಗುಟ್ಟು ಕೇಳಿಕೊಂಡು ಹೋದವನೇ ಇರಬೇಕು," ಅಂದಿತು ಹುಲಿ. ಇಲಿಗಳ ಗುಪ್ತಭಂಡಾರವನ್ನು ಯಾರೋ ಕದ್ದುಕೊಂಡು ಹೋದದ್ದು ತಿಳಿದ ಮೇಲೆ, ಸಿಂಹ ಹಿಂದಿನ ಸಲ ಮನುಷ್ಯನ ವಾಸನೆ ಗುರುತಿಸಿದ್ದು ನಿಜ ಎಂದು ಉಳಿದ ಪ್ರಾಣಿಗಳಿಗೆ ಅರಿವಾಗಿತ್ತು. "ಅವನು ಇಲ್ಲಿ ಎಲ್ಲೋ ಅವಿತುಕೊಂಡಿರಬೇಕು," ಎಂದು ತೋಳ ಹೇಳಿತು. "ಬನ್ನಿ, ಹುಡುಕೋಣ," ಎಂದಿತು ನರಿ.

ಕಲ್ಲಿನ ಹಿಂದೆ ಅಡಗಿ ಕುಳಿತಿದ್ದ ಶತ್ರುವನ್ನು ಹುಡುಕಲು ಅವುಗಳಿಗೆ ಬಹಳ ಹೊತ್ತು ಬೇಕಾಗಲಿಲ್ಲ. ಪ್ರಾಣಿಗಳು ಅವನನ್ನು ಹೊರಗೆಳೆದು ನಾಲ್ಕು ಪಾಲು ಮಾಡಿ ತಮ್ಮತಮ್ಮ ಪಾಲು ಹಂಚಿಕೊಂಡವು.

ಶತ್ರು ತನ್ನ ಕೊನೆ ಕಂಡದ್ದು ಹೀಗೆ. ಮಿತ್ರ ಮುಂದೆ ಎಂದೆಂದಿಗೂ ಸುಖವಾಗಿದ್ದ.

ಇಲ್ಲಿಗೆ ಕಥೆ ಮುಗಿಯಿತು.

ಹೇಳಿದವರು: **ಸೋಫಿ-ಯೋ ಮೊಹ್ತದಿ**

ಕೊರಿಯ

# ಯುವಕ ಮತ್ತು ಹುಲಿ

ಹಿಂದೆ, ಬಹಳ ಹಿಂದೆ. ಒಳ್ಳೆಯ ಮನೆತನಕ್ಕೆ ಸೇರಿದ ಒಬ್ಬ ಯುವಕ ಕುದುರೆ ಹತ್ತಿ ಪ್ರಯಾಣ ಹೊರಟ. ಕೊಂಚ ದೂರ ಹೋಗುವಷ್ಟರಲ್ಲಿ ಒಂದು ಜೀರುಂಡೆ ಅವನ ಕಡೆ ಹಾರಿ ಬಂದು ಕೇಳಿತು, "ಅಯ್ಯಾ ಯುವಕ, ನಾನೂ ನಿನ್ನ ಜತೆ ಬರಬಹುದೆ?" "ಓಹೋ. ಖಂಡಿತ ಬಾ" ಎಂದು ಯುವಕ ಉತ್ತರ ಕೊಟ್ಟ.

ಜೀರುಂಡೆ ಕುದುರೆಯ ಮೈಮೇಲೆ ಇಳಿದು ಕುಳಿತುಕೊಂಡಿತು. ಯುವಕನೂ ಜೀರುಂಡೆಯೂ ಸವಾರಿ ಮಾಡುತ್ತ ಹೊರಟರು. ದಾರಿಯಲ್ಲಿ ಒಂದು ಮೊಟ್ಟೆ ಉರುಳಿಕೊಂಡು ಬಂದಿತು. "ಅಯ್ಯಾ ಯುವಕ. ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ, "ಓಹೋ, ಖಂಡಿತ ಬಾ" ಅಂದ. ಮೊಟ್ಟೆಯೂ ಕುದುರೆ ಹತ್ತಿತು.

ಯುವಕ, ಜೀರುಂಡೆ ಮತ್ತು ಮೊಟ್ಟೆ ಮೂವರೂ ಕುದುರೆ ಪ್ರಯಾಣ ಮುಂದುವರಿಸಿದರು. ಮುಂದೆ ಒಂದು ನಳ್ಳಿ ಅಡ್ಡಗಾಲು ಹಾಕುತ್ತ ಬರುತ್ತಿತ್ತು. ಅದೂ ಕೇಳಿತು, "ಅಯ್ಯಾ ಯುವಕ, ನಾನೂ ಬರಬಹುದೆ?" ಯುವಕ, "ಓಹೋ, ಖಂಡಿತ ಬಾ" ಅಂದ. ನಳ್ಳಿ ಕುದುರೆ ಹತ್ತಿತು.



ಯುವಕ, ಜೀರುಂಡೆ, ಮೊಟ್ಟೆ ಮತ್ತು ನಳ್ಳಿ ಕುದುರೆಪ್ರಯಾಣ ಮುಂದುವರಿಸಿದವು. ಮುಂದೆ ಒಂದು ಅನ್ನದ ಸೌಟು ಎದುರಾಯಿತು. "ಅಯ್ಯಾ ಯುವಕ, ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ, "ಓಹೋ, ಖಂಡಿತ ಬಾ" ಅಂದ. ಸೌಟು ಕುದುರೆ ಹತ್ತಿತು.

ಯುವಕ, ಜೀರುಂಡೆ, ಮೊಟ್ಟೆ, ನಳ್ಳಿ ಮತ್ತು ಅನ್ನದ ಸೌಟುಗಳು ಕುದುರೆಪ್ರಯಾಣ ಮುಂದುವರಿಸಿದವು. ಮುಂದೆ ಒಂದು ದಬ್ಬಳ ಕುಪ್ಪಳಿಸುತ್ತ ಬರುತ್ತಿತ್ತು. "ಅಯ್ಯಾ ಯುವಕ, ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ, "ಓಹೋ, ಖಂಡಿತಾ ಬಾ" ಅಂದ. ದಬ್ಬಳ ಕುದುರೆ ಹತ್ತಿತು.

ಯುವಕ, ಜೀರುಂಡೆ, ಮೊಟ್ಟೆ, ನಳ್ಳಿ, ಅನ್ನದ ಸೌಟು ಮತ್ತು ದಬ್ಬಳಗಳು ಕುದುರೆಪ್ರಯಾಣ. ಮುಂದುವರಿಸಿದವು. ಮುಂದೆ ಒಂದು ಒರಳು ಉರುಳುತ್ತ ಬರುತ್ತಿತ್ತು. "ಅಯ್ಯಾ ಯುವಕ, ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ, "ಓಹೋ. ಖಂಡಿತ ಬಾ" ಅಂದ. ಒರಳು ಕುದುರೆ ಹತ್ತಿತು.

ಯುವಕ, ಜೀರುಂಡೆ, ಮೊಟ್ಟೆ, ನಳ್ಳಿ, ಅನ್ನದ ಸೌಟು, ದಬ್ಬಳ ಮತ್ತು ಒರಳುಗಳು ಕುದುರೆಪ್ರಯಾಣ ಮುಂದುವರಿಸಿದವು. ಮುಂದೆ ಒಂದು ಹುಲ್ಲಿನ ಚಾಪೆ ಎದುರಾಯಿತು. "ಅಯ್ಯಾ ಯುವಕ. ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ. "ಓಹೋ. ಖಂಡಿತ ಬಾ" ಅಂದ. ಹುಲ್ಲಿನ ಚಾಪೆ ಕುದುರೆ ಹತ್ತಿತು.

ಯುವಕ, ಜೀರುಂಡೆ, ಮೊಟ್ಟೆ, ನಳ್ಳಿ, ಅನ್ನದ ಸೌಟು, ದಬ್ಬಳ, ಒರಳು ಮತ್ತು ಹುಲ್ಲಿನ ಚಾಪೆಗಳು ಕುದುರೆಪ್ರಯಾಣ ಮುಂದುವರಿಸಿದವು. ಮುಂದೆ ಒಂದು ಗೋಣಿಯ ಚೀಲ ಗತ್ತಿನಿಂದ ಬರುತ್ತಿತ್ತು. "ಅಯ್ಯಾ ಯುವಕ. ನಾನೂ ಬರಬಹುದೆ?" ಎಂದು ಅದು ಕೇಳಿತು. ಯುವಕ. "ಓಹೋ. ಖಂಡಿತ ಬಾ" ಅಂದ. ಗೋಣಿಯ ಚೀಲ ಕುದುರೆ ಹತ್ತಿತು.



ಸಂಜೆಯ ಹೊತ್ತಿಗೆ ಅವರೆಲ್ಲರೂ ಬೆಟ್ಟದ ಮೇಲಿದ್ದ ಒಂದು ಮನೆ ತಲಪಿದರು. ಯುವಕ ಬಾಗಿಲು ತಟ್ಟಿದ. ಒಳಗಿನಿಂದ ಉತ್ತರ ಬರಲಿಲ್ಲ. ಯುವಕ ನೇರವಾಗಿ ಮನೆಯೊಳಗೆ ಹೋದ. ಅಲ್ಲಿ ಒಬ್ಬ ಹುಡುಗಿ ಬಿಕ್ಕಬಿಕ್ಕಿ ಅಳುತ್ತ ಕುಳಿತಿದ್ದಳು.

"ಏನಾಯಿತು? ಯಾಕೆ ಅಳ್ತಿದಿ?" ಎಂದು ಯುವಕ ಕೇಳಿದ.

"ಮನೆಯ ಹಿಂದುಗಡೆ ಬೆಟ್ಟದಲ್ಲಿ ಒಂದು ಹುಲಿ ವಾಸವಾಗಿದೆ. ಪ್ರತಿದಿನ ರಾತ್ರಿ ಅದು ಬೆಟ್ಟ ಇಳಿದು ಬರುತ್ತದೆ. ಈಗಾಗಲೇ ಅದು ನಮ್ಮ ಅಪ್ಪ ಅಮ್ಮ ಅಣ್ಣ ಅಕ್ಕಂದಿರನ್ನೆಲ್ಲಾ ತಿಂದುಹಾಕಿದೆ. ಇವತ್ತು ನನ್ನ ಸರದಿ. ಅದಕ್ಕೇ ಅಳ್ತಿದೀನಿ."

"ಅಯ್ಯೋ ಪಾಪ! ನೀನೇನೂ ಹೆದರಬೇಕಾಗಿಲ್ಲ. ನಾನೂ ನನ್ನ ಸ್ನೇಹಿತರೂ ಸಹಾಯ ಮಾಡ್ತೀವಿ." ಅಂದ ಯುವಕ.

ಯುವಕ ಸ್ನೇಹಿತರನ್ನೆಲ್ಲಾ ಕರೆದು, ಯಾರು ಯಾರು, ಏನೇನು ಮಾಡಬೇಕೆಂದು ಹೇಳಿದ. ಜೀರುಂಡೆ ಕೋಣೆಯ ಮೂಲೆಯಲ್ಲಿ ಕಾದಿದ್ದು, ಹುಲಿ ಬಂದೊಡನೆಯೇ ಮೋಂಬತ್ತಿಯನ್ನು ಆರಿಸಬೇಕು; ಮೊಟ್ಟೆ





ಬೆಂಕಿಯು ಬೂದಿಯೊಳಗೆ ಬಚ್ಚಿಟ್ಟುಕೊಂಡಿದ್ದು, ಹುಲಿ ಹತ್ತಿರ ಬಂದಾಗ ಅದರ ಕಣ್ಣಿಗೆ ಸಿಡಿಯಬೇಕು; ನಳ್ಳಿ ಬಚ್ಚಲಲ್ಲಿ ಕಾದಿದ್ದು ಅದರ ಕಣ್ಣುಗಳನ್ನು ಬಗೆದುಹಾಕಬೇಕು; ಅನ್ನದ ಸೌಟು ಪಾತ್ರೆಯ ಹಿಂದೆ ಅವಿತುಕೊಂಡಿದ್ದು, ಅದರ ತಲೆಗೆ ಬಡಿಯಬೇಕು; ದಬ್ಬಳ ಬಾಗಿಲ ಹತ್ತಿರ ನೆಲದ ಮೇಲಿದ್ದು, ಅದರ ಕಾಲಿಗೆ ಚುಚ್ಚಬೇಕು. ಒರಳು ಮರ ಹತ್ತಿ, ಅದರ ಮೇಲೆ ಉರುಳಿಬಿದ್ದು ಅದನ್ನು ಜಜ್ಜಿಹಾಕಬೇಕು: ಹುಲ್ಲಿನ ಚಾಪೆ, ಗೋಣಿಯ ಚೀಲಗಳು ಉಗ್ರಾಣದಲ್ಲಿ ಬಚ್ಚಿಟ್ಟುಕೊಂಡಿದ್ದು ಯುವಕ ಕರೆದಾಗ ಬಂದು ಹುಲಿಯನ್ನು ಕಟ್ಟಿ, ಸಾಗಹಾಕಬೇಕು—ಹೀಗೆ ಒಬ್ಬೊಬ್ಬರಿಗೂ ಒಂದೊಂದು ಕೆಲಸ ಗೊತ್ತಾಯಿತು.

ಪ್ರತಿಯೊಬ್ಬರೂ ತಮ್ಮ ತಮ್ಮ ಸ್ಥಳ ಸೇರಿಕೊಂಡರು. ಹುಡುಗಿ ತನ್ನ ಕೋಣೆಗೆ ಹೋಗಿ ಮೋಂಬತ್ತಿ ಹಚ್ಚಿದಳು. ಯುವಕನೂ ಅವಿತುಕೊಂಡ. ಸ್ವಲ್ಪ ಹೊತ್ತಿನಲ್ಲಿಯೇ ಹುಲಿ ಬೆಟ್ಟ ಇಳಿದು ಬಂದಿತು. ಅದು ಮನೆಯೊಳಗೆ ಕಾಲಿಟ್ಟ ಕೂಡಲೇ ಜೀರುಂಡೆ ರೆಕ್ಕೆ ಬಡಿದು ಮೋಂಬತ್ತಿಯನ್ನು ಆರಿಸಿತು. "ಈ ಕತ್ತಲಲಿ



ಹುಡುಗಿಯನ್ನು ಹೇಗೆ ತಾನೆ ತಿನ್ನುವುದು" ಎಂದು ಹುಲಿ ಗೊಣಗಾಡುತ್ತ ಒಲೆಯ ಹತ್ತಿರ ಹೋಗಿ ಬೆಂಕಿಯ ಕೆಂಡವನ್ನು ಊದಿತು. ಆಗ ಮೊಟ್ಟೆ ಸಿಡಿಯಿತು. ಅದರ ಸಿಡಿತಕ್ಕೆ ಬಿಸಿಬೂದಿ ಹಾರಿ ಹುಲಿಯ ಕಣ್ಣಿನಲ್ಲಿ ತುಂಬಿಕೊಂಡಿತು. "ಅಯ್ಯೋ ! ಹೋಯ್ತು ನನ್ನ ಕಣ್ಣು" ಎಂದು ಕಿರಿಚುತ್ತ, ಕಣ್ಣು ತೊಳೆದು ಕೊಳ್ಳಲೆಂದು ಹುಲಿ ಬಚ್ಚಲ ಬಳಿ ಹೋಯಿತು. ಆಗ ನಳ್ಳಿ ಉಗುರಿನಿಂದ ಹುಲಿಯ ಕಣ್ಣನ್ನು ಬಗೆಯಿತು. ಕಣ್ಣು ಕುರುಡಾಗಿ ಹುಲಿ ಹಿಂದಕ್ಕೆ ನೆಗೆದು ನೀರಿನ ಪಾತ್ರೆಗೆ ಡಿಕ್ಕಿ ಹೊಡೆದಾಗ, ಅದರ ಹಿಂದಿದ್ದ ಸೌಟು ಎಗರಿ ಹುಲಿಯ ತಲೆಗೆ ಜೋರಾಗಿ ಪೆಟ್ಟು ಕೊಟ್ಟಿತು. ಹುಲಿ ತಪ್ಪಿಸಿಕೊಂಡು ಹೋದರೆ ಸಾಕೆಂದು ಬಾಗಿಲ ಕಡೆ ಓಡಿದಾಗ, ಅದರ ಕಾಲಿಗೆ ದಬ್ಬಳ ಚುಚ್ಚಿತು. ಹುಲಿ ನೋವು ತಾಳಲಾರದೆ ಮನೆಯಾಚೆ ಹಾರಿಬಂದಾಗ ಚಾವಣಿಯ ಮೇಲಿನಿಂದ ಭಾರವಾದ ಒರಳು ಕೆಳಗುರುಳಿ ಹುಲಿಯ ಮೇಲೆ ಬಿದ್ದು ಅದನ್ನು ಜಜ್ಜಿಹಾಕಿತು.

ಆಗ ಯುವಕ ತಾನು ಅಡಗಿದ್ದ ಸ್ಥಳದಿಂದ ಹೊರಬಂದು, ಚಾಪೆ, ಚೀಲಗಳನ್ನು ಕೂಗಿ ಕರೆದ. ಚಾಪೆ ಹುಲಿಯ ಹೆಣವನ್ನು ಸುತ್ತಿ ಕಟ್ಟಿತು. ಚೀಲ ಅದನ್ನು ತುಂಬಿಕೊಂಡು ಹೊಳೆಗೆ ಎತ್ತಿಕೊಂಡು ಹೋಗಿ ನೀರಿಗೆಸೆಯಿತು. ಹುಲಿಯ ಕಥೆ ಮುಗಿಯಿತು.

ಹುಡುಗಿ ಯುವಕನ ಉಪಕಾರಕ್ಕೆ ವಂದಿಸಿ, ಅಲ್ಲೇ ಉಳಿಯುವಂತೆ ಕೇಳಿಕೊಂಡಳು. ಕೆಲವು ದಿನಗಳ ಮೇಲೆ ಅವರಿಬ್ಬರೂ ಮದುವೆಯಾದರು. ಆಮೇಲೆ ಅವರೂ ಯುವಕನ ಪ್ರಯಾಣದ ಜತೆಗಾರರೂ ಒಟ್ಟಾಗಿ ಕೊನೆಯವರೆಗೂ ಸುಖದಿಂದ ಬಾಳಿದರು.

ಹೇಳಿದವರು: **ಇನ್ ಸೋಬ್ ಸೋಂಗ್**

ಚಿತ್ರಗಳು: **ಕ್ವಾಂಗ್ ಬಾಯೆ ಕಿಮ್**



## ಲಾವೊಸ್

# ಕವಣೆಗಲ್ಲಿನ ಥಾವೊಖಾವ್

ಒಂದಾನೊಂದು ಕಾಲದಲ್ಲಿ ಥಾವೊಖಾವ್ ಎಂಬೊಬ್ಬ ಹತ್ತು ವರ್ಷದ ಹುಡುಗನಿದ್ದ. ಅವನು ಅಪ್ಪ ಅಮ್ಮ ಇಬ್ಬರನ್ನೂ ಕಳೆದುಕೊಂಡು ತಬ್ಬಲಿಯಾಗಿದ್ದ. ಜತೆಗೆ ಎರಡು ಕಾಲೂ ಕುಂಟಾಗಿದ್ದುದರಿಂದ ಅವನಿಗೆ ನಡೆಯಲು ಆಗುತ್ತಿರಲಿಲ್ಲ. ಯಾರಾದರೂ ದಯಾಳುಗಳು ಹಾಕಿದ ಅನ್ನ ತಿಂದು ಬದುಕುತ್ತಿದ್ದ.

ಕಾಲಿಲ್ಲದ ಕಾರಣ ಅವನು ಕೂತಲ್ಲೇ ಕೂತಿರಬೇಕಾಗುತ್ತಿತ್ತು. ಆಡಲು ಸಹ ಏನೂ ಇರಲಿಲ್ಲವಾದ ಕಾರಣ ಬೆರಳಿನಿಂದ ಕವಣೆಗಲ್ಲು ಬೀರಿ ಬೇಸರ ಕಳೆಯುತ್ತಿದ್ದ. ದಿನದಲ್ಲಿ ಹಲವಾರು ಸಲ ಹೀಗೆ ಕಲ್ಲು ತೂರಿ ತೂರಿ ಅಭ್ಯಾಸವಾಗಿ ಅವನು ಬಹುಬೇಗ ಆ ಆಟದಲ್ಲಿಯೇ ಚತುರನಾದ. ಎಷ್ಟೇ ದೂರದಿಂದ ಕಲ್ಲೆಸೆದರೂ ಗುರಿ ತಪ್ಪುತ್ತಿರಲಿಲ್ಲ.

ಹುಡುಗರಿಗೆ ಅವನು ಕಲ್ಲೆಸೆಯುವುದನ್ನು ನೋಡುವುದೆಂದರೆ ಆನಂದ. ಅವರು ಅವನ ಸುತ್ತ ಕಲ್ಲಿನ ಗುಡ್ಡೆ ಹಾಕುತ್ತಿದ್ದರು. ಅವನನ್ನು ತಮ್ಮ ಜತೆ ಕರೆದೊಯ್ಯಲು ಅವನಿಗೊಂದು ನಾಲ್ಕು ಚಕ್ರದ ಗಾಡಿ ಮಾಡಿಕೊಟ್ಟರು.





ಒಂದು ದಿನ ಒಂದು ವಿಚಿತ್ರ ನಡೆಯಿತು. ಹುಡುಗರು ಖಾವ್‌ನ ಗಾಡಿಯನ್ನು ಒಂದು ದೊಡ್ಡ ಆಲದ ಮರದ ಕೆಳಗೆ ನೆರಳಿನಲ್ಲಿ ತಂದು ನಿಲ್ಲಿಸಿದ್ದರು. ಎಂದಿನಂತೆ ಅವನ ಬಳಿ ಕಲ್ಲಿನ ಗುಡ್ಡೆ ಹಾಕಿ, ಅವನು ಕವಣೆ ಬೀರುವುದನ್ನು ನೋಡಲು ಕಾಯುತ್ತಿದ್ದರು.

ಹುಡುಗರು ಉತ್ಸಾಹದಿಂದ ನೋಡುತ್ತಿದ್ದಂತೆ ಥಾವೊಖಾವ್ ಮೇಲೆ ಆಲದಮರಕ್ಕೆ ಕವಣೆ ಬೀರಿ, ಅದರ ಎಲೆಯಲ್ಲಿ ಒಂದು ಆನೆಯ ಆಕಾರವನ್ನು ಕತ್ತರಿಸಿದ. ಹಾಗೆಯೇ ಬಂದು ಕುರಿ ಎಮ್ಮೆಗಳನ್ನೂ ಕತ್ತರಿಸಿದ. ಆ ತೂತುಗಳ ಮೂಲಕ ಸೂರ್ಯನ ಬೆಳಕು ಬಿದ್ದಾಗ ನೆಲದ ಮೇಲೆ ದೊಡ್ಡ ಆಕಾರದ ಆನೆ ಕುರಿ ಎಮ್ಮೆಗಳ ನೆರಳುಂಟಾಯಿತು. ಗಾಳಿ ಬೀಸಿದಾಗ ಎಲೆಗಳು ಅಲುಗಾಡಿ, ನೆಲದ ಮೇಲಿನ ಪ್ರಾಣಿಗಳ ನೆರಳು ಕುಣಿದಾಡಿದವು. ನೋಡಿದರೆ ಅವು ಜೀವಂತವಾಗಿವೆಯೊ ಎಂದು ಭಾಸವಾಗುತ್ತಿತ್ತು. ಹುಡುಗರು ಸಂತೋಷದಿಂದ ಚಪ್ಪಾಳೆ ತಟ್ಟಿ ಕೂಗಾಡಿದರು. ಖಾವ್‌ನಿಗೂ ಸಂತೋಷವಾಯಿತು. ಅವನು ಮತ್ತೆ ಮತ್ತೆ ಹಾಗೆಯೇ ಮಾಡಿದ. ಇದು ಅವರ ಮೆಚ್ಚಿನ ಆಟವಾಯಿತು.

ಅವರು ಒಂದು ದಿನ ಹೀಗೆ ಆಡುತ್ತಿದ್ದಾಗ ಆ ಕಡೆ ಒಂದು ಮೆರವಣಿಗೆ ಬಂದಿತು. ದೊರೆಯ ಮೆರವಣಿಗೆ. ಅವನು ಆ ಪಟ್ಟಣವನ್ನು ನೋಡಲು ಬಂದಿದ್ದ. ದೊರೆಯ ಪಹರೆಯವರನ್ನು ಕಂಡು ಹೆದರಿದ ಹುಡುಗರು ಥಾವೊಖಾವ್‌ನೊಂದಿಗೆ ಮರದ ಹಿಂದೆ ಅವಿತುಕೊಂಡರು.

ಮೆರವಣಿಗೆ ಮರದ ಬಳಿ ಬಂದಿತು. ಮರದ ತಂಗಾಳಿಗೆ ಮನಸೋತು, ದೊರೆ ಅಲ್ಲಿಯೇ ದಣಿವಾರಿಸಿಕೊಳ್ಳಲು ಇಳಿದ. ಮರಕ್ಕೆ ಒರಗಿ ಕುಳಿತಾಗ ಮುಂದೆ ನೆಲದ ಮೇಲೆ ಪ್ರಾಣಿಗಳ ಆಕಾರವಿದ್ದುದು ಕಂಡಿತು.

ಆ ಆಕಾರಗಳನ್ನು ಯಾರು ಮಾಡಿದರು, ಪತ್ತೆ ಮಾಡಿ ಎಂದು ದೊರೆ ಪಹರೆಯವರಿಗೆ ಅಪ್ಪಣೆ ಮಾಡಿದ. ಹುಡುಗರೆಲ್ಲರೂ ಹೆದರಿ ಓಡಿಹೋದರು. ಕುಂಟ ಥಾವೊಖಾವ್ ಒಬ್ಬನೇ ಹಿಂದುಳಿದ. ಮರದ ಹಿಂದೆ ಅವಿತುಕೊಂಡಿದ್ದ ಅವನನ್ನು ಪಹರೆಯವರು ಎಳೆದು ತಂದರು ದೊರೆಯ ಮುಂದೆ ನಿಲ್ಲಿಸಿದರು. ಖಾವ್ ಎಲೆಗಳಲ್ಲಿ ಪ್ರಾಣಿಗಳ ಚಿತ್ರ ಕೊರೆದದ್ದು ಹೇಗೆಂದು ವಿವರಿಸಿದ. ದೊರೆ 'ಮಾಡಿತೋರಿಸು' ಎಂದು ಅಪ್ಪಣೆ ಮಾಡಿದ. ಖಾವ್ ಕೈತುಂಬ ಕಲ್ಲೆತ್ತಿಕೊಂಡು ಒಂದೊಂದಾಗಿ ಮೇಲಕ್ಕೆಸೆದ. ದೊರೆ ಮರುಳಾಗಿ ನೋಡುತ್ತಿದ್ದಂತೆ, ಎಲೆಯಲ್ಲಿ ಪಕ್ಕಿಯ ಚಿತ್ರ ಮೂಡಿತು.

ಹುಡುಗನ ಈ ಅಪರೂಪದ ಚಾತುರ್ಯ ದೊರೆಗೆ ಮೆಚ್ಚುಗೆಯಾಯಿತು. ಒಂದು ಕ್ಷಣ ಯೋಚಿಸಿ ದೊರೆ ಕೇಳಿದ, "ನನ್ನ ಜತೆ ಅರಮನೆಗೆ ಬಾ. ನಿನ್ನಿಂದ ಒಂದು ಕೆಲಸವಾಗಬೇಕಾಗಿದೆ". ಪಹರೆಯವರು ಥಾವೊಖಾವ್‌ನನ್ನು ಆನೆಯ ಮೇಲೆ ಕೂರಿಸಿಕೊಂಡು ಅರಮನೆಗೆ ಕರೆತಂದರು.

ಮಾರನೆಯ ದಿನ ದೊರೆಯ ಮಂತ್ರಿಮಂಡಳಿ ಸೇರುವುದಿತ್ತು. ತನ್ನ ಸಿಂಹಾಸನದ ಹಿಂದೆ ಒಂದು ಪರದೆಯನ್ನು ತೂಗಿಬಿಟ್ಟು ಅದರಲ್ಲಿ ಒಂದು ತೂತನ್ನು ಕೊರೆಯುವಂತೆ ದೊರೆ ಆಳುಗಳಿಗೆ ಹೇಳಿದ. ಪರದೆಯ ಹಿಂದೆ ಥಾವೊಖಾವ್‌ನನ್ನು ಕೂರಿಸಿ ದೊರೆ ಹೇಳಿದ, "ನೋಡು, ಮಗು. ಅಲ್ಲಿ ಮುಂದೆ ನಿನಗೆ ನೇರವಾಗಿ ಒಬ್ಬ ಮನುಷ್ಯ ಕೂತಿರ್ತಾನೆ. ಅವನು ಬಾಯಿ ತೆಗೆದಾಗಲೆಲ್ಲಾ ತೂತಿನ ಮೂಲಕ ಅವನ ಬಾಯಿಗೆ ಒಂದು ಮಣ್ಣಿನ ಹೆಂಟೆ ಎಸೆಯಬೇಕು."

ದೊರೆ ತನಗೇಕೆ ಈ ವಿಚಿತ್ರ ಕೆಲಸ ಹಚ್ಚುತ್ತಿದ್ದಾನೆಂದು ಥಾವೊಖಾವ್‌ನಿಗೆ ಆಶ್ಚರ್ಯವಾಯಿತು. ದೊರೆ ಕಣ್ಣು ಮಿಟುಕಿಸಿ ಹೇಳಿದ, "ಆ ಮಂತ್ರಿ ತುಂಬ ಹರಟುತ್ತಾನೆ. ಬೇರೆ ಯಾರಿಗೂ ಮಾತನಾಡೋಕೆ ಬಿಡೋದಿಲ್ಲ. ಅದನ್ನ ನಿಲ್ಲಿಸೋಕ್ಕೆ ಆಗುತ್ತದೆಯೆ ಅಂತ ನೋಡ್ತಿದೀನಿ."





ಸದ್ಯದಲ್ಲಿಯೇ ಮಂತ್ರಿಗಳೆಲ್ಲರೂ ಬಂದರು. ಸಭೆ ಷುರುವಾಯಿತು. ತನಗೇನು ಕಾದಿದೆ ಎಂದು ತಿಳಿಯದ ವಾಚಾಳಿ ಮಂತ್ರಿ ಬಂದು ಕೂತ ತಕ್ಷಣ ಮಾತಿಗೆ ಮೊದಲುಮಾಡಿದ. ಅವನು ಬಾಯಿ ತೆಗೆದ ತಕ್ಷಣ ಥಾವೊಖಾವ್ ಅವನ ಬಾಯಿಯೊಳಕ್ಕೆ ಒಂದು ಮಣ್ಣುಹೆಂಟೆ ಎಸೆದ. ಮಂತ್ರಿ ಅದು ಯಾವದೋ ಹುಳುವಿರಬೇಕು ಎಂದುಕೊಂಡ. ಅವನಿಗೆ ಉಗುಳಬೇಕೆನ್ನಿಸಿತು. ಆದರೆ ಆಸ್ಥಾನದಲ್ಲಿ ಇದ್ದುದರಿಂದ ಅದನ್ನು ಮರ್ಯಾದೆಯಿಂದ ನುಂಗಿಕೊಂಡ.

ಅವನು ಒಂದೊಂದು ಸಲ ಬಾಯಿ ತೆಗೆದಾಗಲೂ ಹೀಗೆಯೇ ಆಯಿತು. ಅವನಿಗೆ ಮಾತನಾಡಲು ಸಾಧ್ಯವೇ ಆಗಲಿಲ್ಲ. ದೊರೆ ಉಳಿದ ಮಂತ್ರಿಗಳಿಗೆ ಮಾತನಾಡಲು ಹೇಳಿದ. ಅವರಿಗೂ ಮುಖ್ಯವಾದ ವಿಷಯಗಳನ್ನು ವರದಿ ಮಾಡುವುದಿತ್ತು. ಕೊನೆಗೂ ತಮಗೆ ಅವಕಾಶ ಸಿಕ್ಕಿತೆಂದು ಅವರು ಸಂತೋಷ ಪಟ್ಟರು.

ಸಭೆ ಮುಗಿದ ಮೇಲೆ, ದೊರೆ ವಾಚಾಳಿ ಮಂತ್ರಿಯನ್ನು ಕೇಳಿದ, "ಇವತ್ತು ನಿನಗೇನಾಗಿದೆ? ನೀನು ಮಾತನಾಡಿದ್ದನ್ನೇ ಕೇಳಲಿಲ್ಲವಲ್ಲ."

"ನನಗೂ ವರದಿ ಮಾಡಲು ತುಂಬ ವಿಷಯಗಳಿದ್ದವು. ಆದರೆ ಒಂದೊಂದು ಸಲ ಬಾಯಿ ತೆರೆದಾಗಲೂ ಯಾವದೋ ಹುಳು ಬಾಯೊಳಕ್ಕೆ ಹಾರಿಬರುತ್ತಿತ್ತು. ಆದ್ದರಿಂದ ಮಾತನಾಡಲಾಗಲಿಲ್ಲ."

ತನ್ನ ಹಂಚಿಕೆ ಸಫಲವಾದದ್ದರಿಂದ ದೊರೆಗೆ ಸಂತೋಷವಾಯಿತು. ಅವನು ಹೇಳಿದ, "ಎಷ್ಟು ವಿಚಿತ್ರ! ಮುಂದಿನ ಸಲ ಸಭೆ ಸೇರಿದಾಗ, ಇವತ್ತಿನಂತೆಯೇ ಉಳಿದ ಸದಸ್ಯರಿಗೂ ಮಾತನಾಡಲು ಅವಕಾಶ ಕೊಡಬೇಕೆಂಬುದು ನೆನಪಿರಲಿ. ಅವರಿಗೂ ಹೇಳಲು ವಿಷಯವಿರುತ್ತದೆಂಬುದನ್ನು ಅರ್ಥಮಾಡಿಕೊ."

ವಾಚಾಳಿ ಮಂತ್ರಿಗೆ ನಾಚಿಕೆಯಾಯಿತು. ಅವನು ಬಾಯಿ ತೊಳೆದುಕೊಂಡು ಬರಲು ಹೊರಟು ಹೋದ.

ಅದೇ ಕೊನೆ. ಮುಂದೆ ವಾಚಾಳಿ ಮಂತ್ರಿ ನಡುವೆ ಬಾಯಿಹಾಕಿ ಸಭೆಯ ಕಾರ್ಯಕಲಾಪಗಳಿಗೆ ಅಡ್ಡಿಯಾಗುವುದನ್ನು ಬಿಟ್ಟ. ಇತರ ಮಂತ್ರಿಗಳ ಟೀಕೆ-ಟಿಪ್ಪಣಿಗಳನ್ನೂ ಕಿವಿಗೊಟ್ಟು ಕೇಳಿ, ತನ್ನ ಸರದಿಗೆ ಕಾಯುವುದನ್ನು ಕಲಿತ. ದೊರೆಗೆ ಅವನ ತೊಂದರೆ ತಪ್ಪಿತು.

ದೊರೆ ಥಾವೊಖಾವ್‌ನನ್ನು ಅರಮನೆಯಲ್ಲಿಯೇ ಉಳಿಸಿಕೊಂಡ. ಮುಂದೆಂದೂ ಅವನಿಗೆ ಅನ್ನ ಆಸರೆಗಳಿಗೆ ತೊಂದರೆಯಾಗಲಿಲ್ಲ.

ಹೇಳಿದವರು: **ಸ್ಯಾಂಗ್ ಸೆವುನ್‌ಸೋಮ್**
ಚಿತ್ರಗಳು: **ಥಾವೊ ಸಿಲೋಂಗ್ ಫನೋರಥ್**

ಸಿಂಗಪುರ

# ಬೆಟ್ಟ ಏಕೆ ಕೆಂಪಾಗಿದೆ?

ಸಿಂಗಪುರದಲ್ಲಿ 'ಕೆಂಪು ಬೆಟ್ಟ' ಎಂಬ ಹೆಸರಿನಿಂದ ಪರಿಚಿತವಾದ ಒಂದು ಸಣ್ಣ ಬೆಟ್ಟವಿದೆ. ಅದರ ಸುತ್ತ ಮುತ್ತ ವಾಸಿಸುವ ಯಾರಾದರೂ ಮುದುಕರನ್ನು ಆ ಬೆಟ್ಟ ಏಕೆ ಕೆಂಪಾಗಿದೆ ಎಂದು ಕೇಳಿದರೆ, ಅದಕ್ಕೆ ಉತ್ತರವಾಗಿ ಅವರು ಪ್ರಾಯಶಃ ಈ ಕಥೆ ಹೇಳಿಯಾರು.

ಅನೇಕ ವರ್ಷಗಳ ಹಿಂದೆ ಸಿಂಗಪುರದ ಸುತ್ತಣ ಸಮುದ್ರ ಕತ್ತಿಮೀನಿನಿಂದ ತುಂಬಿರುತ್ತಿದ್ದ ಒಂದು ಕಾಲವಿತ್ತು. ಸಮುದ್ರದ ದೊಡ್ಡದೊಡ್ಡ ಅಲೆಗಳಲ್ಲಿ ಅವು ಕೊಚ್ಚಿಬರುತ್ತಿದ್ದವು. ಆ ರಾಕ್ಷಸಮೀನುಗಳ ಕಾಟದಿಂದಾಗಿ ಜನರಿಗೆ ಸಮುದ್ರದಲ್ಲಿ ಸ್ನಾನಮಾಡಲು ಆಗುತ್ತಿರಲಿಲ್ಲ; ಸಮುದ್ರತೀರದಲ್ಲಿ ಓಡಾಡಲೂ ಆಗುತ್ತಿರಲಿಲ್ಲ. ಕತ್ತಿಮೀನುಗಳು ಬಲೆಗಳನ್ನು ಹರಿದು, ದೋಣಿಗಳಿಗೆ ನಷ್ಟಮಾಡುತ್ತಿದ್ದುದರಿಂದ ಬೆಸ್ತರು ಮೀನು ಹಿಡಿಯಲಾಗದೆ ಅವರ ಹೊಟ್ಟೆಪಾಡಿಗೆ ತೊಂದರೆಯಾಗಿತ್ತು.

ಕೊನೆಗೊಮ್ಮೆ ಸಿಂಗಪುರದ ರಾಜ ಆ ಕತ್ತಿಮೀನುಗಳಿಂದ ಪಾರಾಗಲು ಏನಾದರೂ ಉಪಾಯ ಮಾಡ ಬೇಕೆಂದು ನಿರ್ಧರಿಸಿದ. "ಸಮುದ್ರದ ದಂಡೆಯಲ್ಲಿ ಸಾಲುಗಟ್ಟಿ ನಿಂತು, ಅಲೆಯೊಂದಿಗೆ ಕತ್ತಿಮೀನುಗಳು



ಬಂದಾಗ ಅವನ್ನು ಚುಚ್ಚಿ ಕೊಲ್ಲಿ" ಎಂದು ರಾಜ ಸೈನಿಕರಿಗೆ ಅಪ್ಪಣೆ ಮಾಡಿದ. ಅದೇ ಪ್ರಕಾರ ಸೈನಿಕರು ಒಂದು ಕೈಯಲ್ಲಿ ಈಟಿ, ಮತ್ತೊಂದರಲ್ಲಿ ಗುರಾಣಿ ಹಿಡಿದು ತಮ್ಮ ತಮ್ಮ ಸ್ಥಳಗಳಲ್ಲಿ ನಿಂತರು.

ಸಮುದ್ರದ ಭರತ ನುಗ್ಗಿಬಂದಾಗ ಸೈನಿಕರೇನೊ ಆಕ್ರಮಣಕ್ಕೆ ಸಿದ್ಧರಾಗಿ ನಿಂತಿದ್ದರು. ಆದರೆ ಅವರಿಗಿಂತ ಮೊದಲು ಕತ್ತಿಮೀನುಗಳು ಅವರ ಮೇಲೆ ಬಿದ್ದು ತಮ್ಮ ಚೂಪಾದ ಕತ್ತಿಮೊನೆಯ ಮೂತಿಯಿಂದ ಅವರನ್ನು ಇರಿದವು. ಹಲವರು ಸತ್ತರು; ಅದಕ್ಕೂ ಹೆಚ್ಚು ಮಂದಿ ಗಾಯಗೊಂಡರು. ಅವರ ಸ್ಥಳದಲ್ಲಿ ಇನ್ನೊಂದು ಸಾಲು ಸೈನಿಕರು ಬಂದು ನಿಲ್ಲುವಂತೆ ರಾಜ ಅಪ್ಪಣೆ ಮಾಡಿದ. ಈ ಸಲವೂ ಕತ್ತಿಮೀನುಗಳು ಅವರನ್ನು ಚುಚ್ಚಿ ಕೆಡವಿದವು. ಪದೇಪದೇ ಹೀಗೆಯೇ ಆಯಿತು.

ಒಬ್ಬ ಹುಡುಗ ಅಷ್ಟು ಹೊತ್ತೂ ದೂರದಲ್ಲಿ ನಿಂತು ಅದೆಲ್ಲವನ್ನೂ ನೋಡುತ್ತಿದ್ದ. ಅವನ ಮುಖದ ಮೇಲೆ ದಿಗ್ಭ್ರಮೆ ಎದ್ದು ಕಾಣುತ್ತಿತ್ತು. ಅವನು ಕೊನೆಗೊಮ್ಮೆ ರಾಜನ ಬಳಿ ಹೋಗಿ ಕೇಳಿದ, "ಇಷ್ಟೊಂದು ಜನ ಸೈನಿಕರನ್ನು ಹೀಗೇಕೆ ಸಾಯಗೊಡುತ್ತಿದ್ದೀರಿ?"

"ಇನ್ನೇನು ಮಾಡುವುದು, ಮಗು?" ರಾಜ ಹೇಳಿದ.



"ಸಮುದ್ರದ ದಂಡೆಯ ಉದ್ದಕ್ಕೂ ಸೈನಿಕರ ಬದಲು ಒಂದು ಸಾಲು ಬಾಳೆಯ ಮರಗಳನ್ನು ತಂದು ನಿಲ್ಲಿಸಿದರೆ, ಮೀನುಗಳಿಗೆ ತಡೆಯಾಗುತ್ತದೆ. ಯಾರೂ ಸಾಯುವುದಿಲ್ಲ."

"ಹುಡುಗನ ಬುದ್ಧಿವಂತಿಕೆಯನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. ಅವನು ಆ ಕ್ಷಣ ಸೈನಿಕರಿಗೆ ಸಿಕ್ಕಿದಷ್ಟು ಬಾಳೆಯ ಮರಗಳನ್ನು ಕಡಿದು ತಂದು, ದಂಡೆಯ ಮೇಲೆ ಅವುಗಳ ಗೋಡೆ ಕಟ್ಟುವಂತೆ ಅಪ್ಪಣೆ ಮಾಡಿದ. ಹತ್ತಿರದಲ್ಲೇ ಒಂದು ಬಾಳೆಯ ತೋಟವಿತ್ತು. ಸೈನಿಕರು ರಾಜ ಹೇಳಿದಂತೆಯೇ ಮಾಡಿದರು.



ಸ್ವಲ್ಪ ಹೊತ್ತಿನಲ್ಲಿಯೇ ನೆರೆ ಬಂತು. ನೀರು ಕತ್ತಿಮೀನುಗಳಿಂದ ತುಂಬಿ ಬೆಳ್ಳಗೆ ಕಾಣುತ್ತಿತ್ತು. ಸಮುದ್ರದ ಅಲೆಗಳು ಬಾಳೆಯ ಮರದ ಗೋಡೆಗೆ ಬಡಿದಂತೆ ಮೀನುಗಳ ಕತ್ತಿಮೂತಿ ಬಾಳೆಯ ಮರದ ಮೃದುವಾದ ದಿಂಡಿಗೆ ಚುಚ್ಚಿಕೊಂಡವು. ಅಲೆ ಇಳಿದಾಗ ಸಹಸ್ರಾರು ಕತ್ತಿಮೀನುಗಳು ಹಿಂದುಳಿದು ವಿಲವಿಲನೆ ಒದ್ದಾಡಿದವು. ಸೈನಿಕರು ಅವುಗಳನ್ನು ತಮ್ಮ ಚೂರಿಗಳಿಂದ ಇರಿದು ತುಂಡುತುಂಡು ಮಾಡಿದರು. ಪದೇಪದೇ ಹೀಗೆಯೇ ಆಯಿತು. ಕೊನೆಗೆ ಸಮುದ್ರದಲ್ಲಿ ಒಂದಾದರೂ ಕತ್ತಿಮೀನು ಉಳಿಯಲಿಲ್ಲ.

ರಾಜನಿಗೆ ಕತ್ತಿಮೀನುಗಳಿಂದ ಪಾರಾದುದಕ್ಕೆ ಸಂತೋಷವಾಯಿತು. ಆದರೆ ಆಮೇಲೆ ಹುಡುಗನ ಚತುರಬುದ್ಧಿಯನ್ನು ಕುರಿತು ಯೋಚಿಸಿದಾಗ ಕಳವಳ ಹತ್ತಿಕೊಂಡಿತು. "ಇಂಥ ಚುರುಕುಬುದ್ಧಿಯ ಹುಡುಗ ಬೆಳೆದು ದೊಡ್ಡವನಾದ ಮೇಲೆ ನನ್ನ ಸಿಂಹಾಸನಕ್ಕೇ ಅಪಾಯವಾದಾನು" ಎಂದು ತನಗೆ ತಾನೇ ಅಂದುಕೊಂಡ. ಯೋಚಿಸಿದಷ್ಟೂ ಭಯ ಹೆಚ್ಚಾಯಿತು. ಕೊನೆಗೊಂದು ದಿನ ರಾಜ ತನ್ನ ಸೇನಾಧಿಪತಿಯಲ್ಲಿ ಚಿಂತೆ ತೋಡಿಕೊಂಡ.

ಸೇನಾಧಿಪತಿ ತಡಮಾಡದೆ ಹುಡುಗನನ್ನು ಮುಗಿಸಿಬಿಡಲು ಹೊರಟ. ರಾಜನ ಉದ್ದೇಶ ಅದೇ ಎಂದು ಅವನು ಅಂದುಕೊಂಡ. ಆ ರಾತ್ರಿ ಸೇನಾಧಿಪತಿ ನಾಲ್ಕು ಜನ ಸೈನಿಕರನ್ನು ಹುಡುಗ ವಾಸಿಸುತ್ತಿದ್ದ ಬೆಟ್ಟದ ಮೇಲಿನ ಸಣ್ಣ ಜೋಪಡಿಗೆ ಕಳಿಸಿಕೊಟ್ಟ. ಸೈನಿಕರು ಬಂದಾಗ ಹುಡುಗ ಮಲಗಿ ನಿದ್ರಿಸುತ್ತಿದ್ದ. ಅವರು ಅವನನ್ನು ಆ ಕ್ಷಣ ಕೊಂದುಹಾಕಿದರು. ಹುಡುಗನ ರಕ್ತ ಬೆಟ್ಟದ ಮೇಲಿನಿಂದ ಹರಿದು, ಹರಿವ ಕಡೆಯೆಲ್ಲ ನೆಲ ಕೆಂಪಾಯಿತು.

ಇವತ್ತಿನವರೆಗೂ ಆ ಸಣ್ಣಬೆಟ್ಟದ ಮಣ್ಣು ಕೆಂಪಾಗಿಯೇ ಇದೆ. ಜನ ಅದನ್ನು 'ಕೆಂಪು ಬೆಟ್ಟ' ಎಂದು ಕರೆಯುತ್ತಾರೆ.

ಹೇಳಿದವರು: **ಚೀಯಾ ಹರ್ನ್ಚೆಕ್**

ಚಿತ್ರಗಳು: **ಕ್ವಾನ್ ಷಾನ್ ಮೆಯ್**

## ಥೈಲ್ಯಾಂಡ್

# ಮಕಾತೊ ಮತ್ತು ಕವಡೆ

ಒಂದಾನೊಂದು ಕಾಲದಲ್ಲಿ ಒಬ್ಬ ಹುಡುಗನಿದ್ದ. ಅವನ ಹೆಸರು ಮಕಾತೊ. ಮಕಾತೊ ಇನ್ನೂ ಚಿಕ್ಕವನಿರುವಾಗಲೇ ತಂದೆತಾಯಿಯರನ್ನು ಕಳೆದುಕೊಂಡು ತಬ್ಬಲಿಯಾಗಿದ್ದ. ನೋಡಿಕೊಳ್ಳಲು ಅಣ್ಣಅಕ್ಕಂದಿರಾಗಲೀ ಸ್ನೇಹಿತರಾಗಲೀ ಇಲ್ಲದೆ ಅವನು ತನ್ನ ಅನ್ನವನ್ನು ತಾನೇ ಸಂಪಾದಿಸಿಕೊಳ್ಳಬೇಕಾಗಿತ್ತು. ಸಾಮಾನು ಹೊರುವುದು, ಕಾಡು ಕಡಿಯುವುದು, ಹಂದಿ ಮೇಯಿಸುವುದು—ಹೀಗೆ ಅವನು ಎಲ್ಲ ತರಹದ ಕೆಲಸಗಳನ್ನೂ ಮಾಡುತ್ತಿದ್ದ. ಎಂದೂ ಕೆಲಸದಲ್ಲಿ ಮೈಗಳ್ಳನಾಗಿರಲಿಲ್ಲ. ಸಂಪಾದಿಸುತ್ತಿದ್ದ ಕೂಲಿ ಕಡಿಮೆಯಾದರೂ ತೃಪ್ತಿಯಿಂದಿದ್ದ. ಕೆಲಸ ಮಾಡದೆ ಬಿಟ್ಟರೆ ಹೊಟ್ಟೆಗಿಲ್ಲದೇ ಸಾಯಬೇಕಾಗುತ್ತದೆ ಎಂದು ಅವನು ಬಲ್ಲ. ಎಲ್ಲೇ ಕೆಲಸ ಮಾಡಲಿ, ಮಾಲಿಕರು ಅವನ ಸೂಕ್ಷ್ಮಬುದ್ಧಿ, ಕಷ್ಟದ ದುಡಿಮೆ, ಒಳ್ಳೆಯ ಸ್ವಭಾವ ಹಾಗೂ ಹಸನ್ಮುಖಗಳಿಗೆ ಮೆಚ್ಚುತ್ತಿದ್ದರು.

ಒಂದು ದಿನ ಸಂಜೆ ಅವನು ಒಂದು ದೊಡ್ಡ ಕಟ್ಟು ಸೌದೆಯನ್ನು ಕಡಿದು ಮುಗಿಸಿ, ಕೊಂಚ ದಣಿವಾರಿಸಿಕೊಳ್ಳಲು ಕುಳಿತ. ಆಗ ಮುಂದೆ ಭವಿಷ್ಯದಲ್ಲಿ ಏನೆಲ್ಲ ಮಾಡಬೇಕೆಂದು ಯೋಚಿಸತೊಡಗಿದ. ದೂರದೂರದ ಅಪರಿಚಿತ ದೇಶಗಳಿಗೆ ಹೋಗಿ, ಮೈ ನವಿರೇಳುವಂತಹ ಸಾಹಸಕಾರ್ಯಗಳನ್ನು ಕೈಗೊಂಡು ತನ್ನ ಅದೃಷ್ಟ ಪರೀಕ್ಷಿಸುವ ಚಪಲವಾಯಿತು.

ಅವನನ್ನು ನೋಡಿ ಮಾಲಿಕ "ಏನು ಗಾಢಾಲೋಚನೆಯಲ್ಲಿದ್ದಿ, ಮಗು" ಎಂದು ಕೇಳಿದ.

ಮಕಾತೊ ಈಶಾನ್ಯದ ಕಡೆ ಕೈ ತೋರಿಸಿ ಹೇಳಿದ, "ದೂರ ದೇಶ ಹೋಗಿ ಏನಾದರೂ ಸಾಹಸ ಮಾಡುವ ಆಸೆಯಾಗುತ್ತದೆ. ಆ ಕಡೆ ನೆಲ ಫಲವತ್ತಾಗಿದೆ. ಜನರೂ ದಯಾಳುಗಳು ಅಂತ ಕೇಳಿದೀನಿ. ಆ ದೇಶವನ್ನು ಕಣ್ಣಾರೆ ಕಾಣುವುದಾದರೆ ಎಷ್ಟು ಚೆನ್ನ!" ಅವನ ಕಣ್ಣು ಉತ್ಸಾಹದಿಂದ ಮಿನುಗಿತು.

ಮಾಲಿಕ ಹೇಳಿದ, "ನೀನು ಹೋಗಬೇಕೆಂದಿರುವ ದೇಶದ ಹೆಸರು ಸುಖೋಥಾಯಿ. ಅಲ್ಲಿನ ದೊರೆ ಪ್ರಾರುವಾಂಗ್. ಅವನು ತುಂಬ ದಯಾಳು ಅನ್ನುತ್ತಾರೆ. ನೀನು ಅಲ್ಲಿಗೆ ಹೋಗುವುದಾದರೆ ಅದು ಅದೃಷ್ಟವೇ ಸರಿ."

ಕೆಲವು ದಿನಗಳಾದ ಮೇಲೆ ಮಕಾತೊ ತನ್ನ ಅದೃಷ್ಟ ಪರೀಕ್ಷಿಸಲು ನಿಶ್ಚಯಿಸಿದ. ಹಳ್ಳಿ ಬಿಟ್ಟು ವಿಶಾಲ ಪ್ರಪಂಚಕ್ಕೆ ಕಾಲಿಟ್ಟ. ಹೊಸಹೊಸ ನೋಟಗಳನ್ನು ನೋಡುತ್ತ, ದಾರಿಯಲ್ಲಿ ಸಿಕ್ಕಿದವರೊಡನೆ ಮಾತನಾಡುತ್ತ ಅವನು ಉತ್ಸಾಹದಿಂದ ಮುನ್ನಡೆದ. ಒಂದು ತಿಂಗಳ ಮೇಲೆ ಸುಖೊಥಾಯಿ ರಾಜ್ಯದ ಅಂಚಿನಲ್ಲಿದ್ದ ಒಂದು ಹಳ್ಳಿಗೆ ಬಂದ.

ಒಬ್ಬ ಮುದುಕಿ ತಲೆಯ ಮೇಲೆ ದೊಡ್ಡ ನೀರಿನ ಕೊಡವನ್ನು ಹೊತ್ತುಕೊಂಡು ಹೋಗುತ್ತಿದ್ದಳು. "ಅವ್ವಾ, ಬಾಯಾರಿಕೆಯಾಗಿದೆ. ಕುಡಿಯಲು ಕೊಂಚ ನೀರು ಕೊಡ್ತೀಯಾ?" ಎಂದು ಮಕಾತೊ ಅವಳನ್ನು

ಕೇಳಿದ. ಮುದುಕಿ ಕೊಡದಿಂದ ಒಂದು ಸಣ್ಣ ಲೋಟಕ್ಕೆ ನೀರು ಬಗ್ಗಿಸಿ, ಮಕಾತೊನಿಗೆ ಕೊಟ್ಟು ಹೇಳಿದಳು. "ಎಲ್ಲಿಂದ ಬಂದೆ? ಇಲ್ಲಿ ಒಬ್ಬನೇ ಯಾಕೆ ಇದ್ದಿ? ತುಂಬ ದೂರ ನಡೆದು ಬಂದಂತೆ ಕಾಣ್ತೀಯಲ್ಲ."

"ತುಂಬ ಉಪಕಾರವಾಯ್ತವ್ವ," ಮಕಾತೊ ಹೇಳಿದ.

"ನಿಮ್ಮ ಅಪ್ಪ ಅಮ್ಮ ಯಾರು? ನಿನ್ನ ಸಂಸಾರವೆಲ್ಲಿ?" ಮುದುಕಿ ಮತ್ತೆ ಕೇಳಿದಳು.

"ನನಗೆ ಅಪ್ಪ ಅಮ್ಮ ಯಾರೂ ಇಲ್ಲ. ದೂರದ ಮೋನ್ ಪಟ್ಟಣದಿಂದ ಬಂದಿದೀನಿ." ಮಕಾತೊ ಉತ್ತರಿಸಿದ.

"ಅಯ್ಯೋ ದೇವರೇ! ನಿಜವಾಗಿಯೂ ಮೋನ್‌ನಿಂದ ಬಂದಿದೀಯಾ? ನಿನ್ನಂಥ ಚಿಕ್ಕ ಹುಡುಗ ಒಬ್ಬನೇ ಪ್ರಯಾಣ ಮಾಡೋದು ಅಂದರೇನು?"

"ಸುಖೋಥಾಯಿನ ದೊರೆ ಪ್ರಾರುವಾಂಗರ ದರ್ಶನ ಮಾಡಬೇಕು ಅನ್ನಿಸಿತು. ಅವರು ಬಹಳ ದಯಾಳು ಅಂತ ಜನ ಹೇಳ್ತಾರೆ."

"ನೀನು ತುಂಬ ಗಟ್ಟಿಮನಸ್ಸಿನ ಹುಡುಗ," ಮುದುಕಿ ಹೇಳಿದಳು. "ನನ್ನ ಜತೆ ಬಾ. ಯಾರು ಬಲ್ಲರು, ಒಂದಲ್ಲ ಒಂದು ದಿನ ಪ್ರಾರುವಾಂಗರ ದರ್ಶನವಾಗಬಹುದು."

ಮಕಾತೊ ಸಂತೋಷದಿಂದ ಅವಳ ಜತೆ ಹೊರಟ. ಆ ದಯಾಳು ಹೆಂಗಸಿನ ಹತ್ತಿರ ಕೆಲಸ ಮಾಡಿದರೆ ಇರಲು ಸ್ಥಳ ಸಿಗುತ್ತದೆ. ಒಂದಿಷ್ಟು ಊಟ ಸಿಗುತ್ತದೆ. ಅದೃಷ್ಟವಿದ್ದರೆ ಎಂದಾದರೊಂದು ದಿನ ದೊರೆಯ ದರ್ಶನವೂ ಆಗಬಹುದು ಎಂದು ಅವನಿಗೆ ಅನ್ನಿಸಿತು.

ಮುದುಕಿಯ ಗಂಡ ದೊರೆಯ ಮಾವುತರಲ್ಲೊಬ್ಬ. ದೊರೆಯ ಲಾಯದಲ್ಲಿದ್ದ ನೂರಾರು ಆನೆಗಳನ್ನು ನೋಡಿಕೊಳ್ಳುತ್ತಿದ್ದ. ಮಕಾತೊ ಮಾವುತನಿಗೆ ಆನೆಗಳಿಗೆ ಆಹಾರ ಹುಡುಕಿ ತರುವುದು, ಲಾಯವನ್ನು ಗುಡಿಸಿ ತೊಳೆಯುವುದು ಮುಂತಾದ ಸಹಾಯ ಮಾಡುತ್ತಿದ್ದ. ಅವನು ಕಷ್ಟಪಟ್ಟು ದುಡಿಯುತ್ತಿದ್ದುದರಿಂದ ಮಾವುತ ಹಾಗೂ ಅವನ ಹೆಂಡತಿಯರ ಪ್ರೀತಿ ಗಳಿಸಿದ.

ಒಂದು ದಿನ ಆಕಾಶ ತಿಳಿಯಾಗಿದ್ದು, ಹವಾಮಾನ ಅದೆಷ್ಟು ಚೆನ್ನಾಗಿತ್ತೆಂದರೆ ಮಕಾತೊನಿಗೆ ಅವೊತ್ತು ತನ್ನ ಭಾಗ್ಯದ ದಿನವಿರಬೇಕು ಅನ್ನಿಸಿತು. ಲಾಯದಲ್ಲಿ ಕೆಲಸ ಮಾಡುತ್ತಿದ್ದಾಗ ಭವ್ಯವಾದ ಬಟ್ಟೆ ತೊಟ್ಟ ಒಬ್ಬ ಎತ್ತರದ ಯುವಕ ಒಳಗೆ ಬಂದ. ಅವನ ಬೆನ್ನ ಹಿಂದೆ ಸೇವಕರಿದ್ದರು. ಅವನೇ ಪ್ರಾರೂವಾಂಗ್. ಮಕಾತೊ ತಕ್ಷಣ ಎರಡು ಕೈಗಳನ್ನೂ ಮೇಲೆತ್ತಿ ಬಗ್ಗಿ ನಮಸ್ಕಾರ ಮಾಡಿದ. ಅವನ ಎದೆ ಹೊಡೆದು ಕೊಳ್ಳುತ್ತಿತ್ತು.

ದೊರೆ ಮಾವುತನನ್ನು ಕೇಳಿದ, "ಈ ಹುಡುಗ ಎಲ್ಲಿಯವನು?"

ಮುದುಕ ಕೈಮುಗಿದು ಹೇಳಿದ, "ದೂರದ ಮೋನ್ ಪಟ್ಟಣದಿಂದ ಬಂದಿದ್ದಾನೆ. ಪ್ರಭುಗಳ ಬಗ್ಗೆ ತುಂಬ ಕೇಳಿದ್ದು. ತಮ್ಮನ್ನು ಕಣ್ಣಾರೆ ನೋಡಬೇಕೆನಿಸಿತಂತೆ."



"ಇವನ ವಯಸ್ಸೆಷ್ಟು?"

"ಹನ್ನೆರಡು ವರ್ಷ, ಪ್ರಭು."

ದೊರೆ ಹೇಳಿದ. "ಹುಡುಗ ನೋಡಲು ಸುಟಿಯಾಗಿದ್ದಾನೆ, ಕಷ್ಟಪಟ್ಟು ಕೆಲಸ ಮಾಡ್ತಾನೆ. ಚೆನ್ನಾಗಿ ನೋಡಿಕೊ."

ದೊರೆ ಮುಂದೆ ಹೋದಮೇಲೆ ಮಕಾತೊನಿಗೆ ನೆಲದ ಮೇಲೆ ಒಂದು ಕವಡೆ ಬಿದ್ದಿದ್ದುದು ಕಾಣಿಸಿತು. ಓಡಿಹೋಗಿ ಅದನ್ನೆತ್ತಿಕೊಂಡು ದೊರೆಯ ಮುಂದೊಡ್ಡಿದ. ದೊರೆ ನಗುತ್ತ ಹೇಳಿದ, "ನೀನೇ ಇಟ್ಟುಕೊ."

"ಎಂಥ ಅದೃಷ್ಟ. ದೊರೆ ನನಗೊಂದು ಕವಡೆ ಕೊಟ್ಟರು," ಮಕಾತೊ ತನಗೆ ತಾನೆ ಹೇಳಿಕೊಂಡ.

ಆ ಕಾಲದಲ್ಲಿ ಸುಖೋಥಾಯಿನ ಜನ ಕವಡೆಯನ್ನು ಹಣವಾಗಿ ಬಳಸುತ್ತಿದ್ದರು. ಒಂಟಿ ಕವಡೆಗೆ ಅಷ್ಟೇನೂ ಬೆಲೆಯಿಲ್ಲದಿದ್ದರೂ ಅದು ದೊರೆ ಕೊಟ್ಟದ್ದಾದ್ದರಿಂದ ಮಕಾತೊ ಅದರಿಂದ ಆದಷ್ಟು ಹೆಚ್ಚು ಪ್ರಯೋಜನ ಪಡೆಯಬಯಸಿದ. ಅದನ್ನು ಹೆಚ್ಚು ಹಣ ಗಳಿಸುವ ಹಾಗೆ ಬಳಸುವುದು ಹೇಗೆ ಎಂದು ಅವನಿಗೆ ಬಹಳ ದಿನಗಳವರೆಗೆ ಹೊಳೆಯಲಿಲ್ಲ.

ಒಂದು ದಿನ ಪೇಟೆಯಲ್ಲಿ ಹೋಗುತ್ತಿದ್ದಾಗ ಅಲ್ಲೊಂದು ಅಂಗಡಿಯಲ್ಲಿ ತರಹಾವಾರಿ ಗಿಡಗಳ ಬೀಜಗಳು ಕಣ್ಣಿಗೆ ಬಿದ್ದವು. ಕಣ್ಣಾಡಿಸಿ ನೋಡಿದಾಗ ಒಂದು ಬುಟ್ಟಿಯ ತುಂಬ ಲೆಟ್ಯೂಸ್ ಸೊಪ್ಪಿನ ಬೀಜಗಳಿದ್ದವು. ತಾನೂ ಲೆಟ್ಯೂಸಿನ ಗಿಡಗಳನ್ನು ಬೆಳೆಯಬಹುದಲ್ಲವೆ? ಅಂಗಡಿಯಲ್ಲಿ ಸರಸಗಾತಿಯಂತೆ ಕಾಣುತ್ತಿದ್ದ ಒಬ್ಬ ಹೆಂಗಸು ಕುಳಿತಿದ್ದಳು. "ಒಂದಿಷ್ಟು ಲೆಟ್ಯೂಸ್ ಬೀಜ ಬೇಕಲ್ಲವ್ವ," ಎಂದು ಕೇಳಿದ ಮಕಾತೊ.

"ಓಹೋ, ಎಷ್ಟು ಕೊಡಲಿ?" ಅಂದಳು ಆ ಹೆಂಗಸು.

"ನನ್ನ ಹತ್ತಿರ ಒಂದು ಕವಡೆಯಿದೆ," ಅಂದ ಮಕಾತೊ.

"ಒಂದು ಕವಡೆ!" ಹೆಂಗಸು ನಗುತ್ತ ಹೇಳಿದಳು. "ಅದಕ್ಕೆಷ್ಟು ಬರುತ್ತೆ. ಅಷ್ಟು ಕಡಿಮೆ ಅಳೆಯೋಕ್ಕೂ ಆಗೋಲ್ಲವಲ್ಲ."

ಮಕಾತೊ ಉತ್ಸಾಹದಿಂದ ಹೇಳಿದ. "ಬೀಜದ ಗುಡ್ಡೆಗೆ ನನ್ನ ಬೆರಳು ಅದ್ದತೀನಿ. ಅವಕ್ಕೆ ಎಷ್ಟು ಅಂಟಿಕೊಳ್ಳುತ್ತೊ ಅಷ್ಟು ಕೊಡು. ಒಂದು ಕವಡೆಯ ಬೆಲೆಗೆ ಅಷ್ಟು ಸರಿ ಅಂತ ಅನ್ನಿಸುತ್ತೆ."

ಹೆಂಗಸಿಗೆ ಮಕಾತೋನ ಸಲಹೆ ತಮಾಷೆಯೆನ್ನಿಸಿತು. "ಸರಿ, ಆಯಿತು. ತೊಗೊ" ಅಂದಳು.

ಮಕಾತೊ ಹೆಂಗಸಿಗೆ ಕವಡೆ ಕೊಟ್ಟ. ಆಮೇಲೆ ಬೆರಳನ್ನು ಬಾಯಲ್ಲಿಟ್ಟು ಒದ್ದೆಮಾಡಿ, ಬೀಜದ ಗುಡ್ಡೆಗೆ ಅದ್ದಿದ. ಬೆರಳನ್ನು ಮೇಲೆತ್ತಿದಾಗ ಅದಕ್ಕೆ ಸುತ್ತಲೂ ಬೀಜ ಅಂಟಿಕೊಂಡಿತ್ತು. ಮಕಾತೊ ಆ ಬೀಜಗಳನ್ನು ಕೆರೆದು ಅಂಗೈಯಲ್ಲಿ ಭದ್ರವಾಗಿ ಇಟ್ಟುಕೊಂಡು ಸಂತೋಷದಿಂದ ಮನೆಗೆ ಬಂದ.

ಈಗ ಮಕಾತೋನ ಬಳಿ ಬೀಜವಿತ್ತು. ಅವನು ನೆಲವನ್ನು ಅಗತೆಮಾಡಿ ಬೀಜ ನೆಟ್ಟು ದಿನವೂ ಪಾತಿಗೆ ನೀರು ಹಾಕಿದ. ಕೆಲವೇ ದಿನಗಳಲ್ಲಿ ಸಸಿಗಳು ಹುಟ್ಟಿಕೊಂಡವು. ದಿನದಿನವೂ ಹೊಸಹೊಸ ಜಾಗ ಹುಡುಕಿ, ಅಗೆದು, ಒಟ್ಟಲಿನಿಂದ ಸಸಿ ತೆಗೆದು ನಾಟಿಹಾಕಿದ. ಅವನಿಗೆ ತನ್ನ ಬಗ್ಗೆಯೇ ಹೆಮ್ಮೆ ಎನಿಸಿತು.

"ಎಷ್ಟು ಒಳ್ಳೆಯ ಲೆಟ್ಯೂಸ್ ಇವು. ದೊರೆಗೆ ಒಂದಿಷ್ಟು ಕೊಡಲಾದರೆ !" ಅಂದುಕೊಂಡ.

ಒಂದು ದಿನ ಮತ್ತೆ ದೊರೆ ಲಾಯದ ಮುಂದೆ ಹಾದುಹೋಗುತ್ತಿದ್ದ. ಆ ಅವಕಾಶಕ್ಕೆ ಕಾದಿದ್ದ ಮಕಾತೊ ದೊರೆಗೆ ಅಡ್ಡಬಿದ್ದು ಅವನಿಗೆ ದೊಡ್ಡ ದೊಡ್ಡ ಲೆಟ್ಯೂಸು ಗಳನ್ನು ಅರ್ಪಿಸಿದ.



ದೊರೆಗೆ ಆಶ್ಚರ್ಯವಾಯಿತು. "ಇವನ್ನು ಎಲ್ಲಿಂದ ತಂದೆ," ಎಂದು ಕೇಳಿದ.

"ನಾನೇ ಬೆಳೆದದ್ದು, ಪ್ರಭು. ನೀವು ಆವೊತ್ತು ಒಂದು ಕವಡೆ ಕೊಟ್ಟಿದ್ದಿರಲ್ಲ, ಅದರಿಂದ," ಮಕಾತೊ ಜಂಬದಿಂದ ನಗುತ್ತ ಹೇಳಿದ.

"ಅದು ಹೇಗೆ?" ದೊರೆ ಬೆರಗಾಗಿ ಕೇಳಿದ.

ಮಕಾತೊ ಕಥೆಯೆಲ್ಲವನ್ನೂ ಹೇಳಿದ. ದೊರೆ ಅವನ ಬುದ್ಧಿ, ಉದ್ಯೋಗಶೀಲತೆಗಳನ್ನು ಮೆಚ್ಚಿದ. ಅವನನ್ನು ಅರಮನೆಗೆ ಕರೆಸಿಕೊಂಡು ಅಲ್ಲೇ ಕೆಲಸ ಕೊಟ್ಟ.

ದಿನ ಕಳೆದಂತೆ ಮಕಾತೊ ಚೆಲುವಾಗಿ ಎತ್ತರಕ್ಕೆ ಬೆಳೆದ. ನಯನಾಜೂಕುಗಳನ್ನು ಕಲಿತುಕೊಂಡು ದೊರೆಯ ಸೇವೆ ಮಾಡಿದ. ಅವನ ಸ್ವಾಮಿಭಕ್ತಿಯಿಂದಾಗಿ ದೊರೆ ಅವನನ್ನು ಸಂಪೂರ್ಣವಾಗಿ ನಂಬುತ್ತಿದ್ದ. ಮೇಲು-ಮೇಲಿನ ಪದವಿಗಳಿಗೆ ಬಡತಿ ಮಾಡಿ, ಕೊನೆಗೆ ಅವನಿಗೆ ಖುನ್‌ವಾಂಗ್ ಎಂಬ ಬಿರುದಿತ್ತ. ಹಾಗೆಂದರೆ ಆಸ್ಥಾನದಲ್ಲಿ ಅತ್ಯಂತ ಪ್ರಮುಖನಾದವನು ಎಂದರ್ಥ. ಅವನಿಗೆ ಚೆಲುವೆ

ಯಾದ ತನ್ನ ಕಿರಿಯ ಮಗಳನ್ನು ಕೊಟ್ಟು ಮದುವೆಯನ್ನೂ ಮಾಡಿದ. ಆಮೇಲೆ ಮೋನ್ ಪ್ರಾಂತದ ರಾಜನನ್ನಾಗಿ ನೇಮಿಸಿದ.  ಹಿಂದೊಮ್ಮೆ ಬಡವನೂ ಅನಾಥನೂ ಆಗಿದ್ದ ಮಕಾತೊನೇ ಆ ಸಮೃದ್ಧದೇಶದ ಅರಸನಾದ.

ಹೇಳಿದವರು: **ಸುಪನ್ನೀ ಖಾಂಚನಥಿತಿ**

ಚಿತ್ರಗಳು: **ಸೋಮ್‌ಚೆತ್ ಕಲಾದಿಸ್**

## ವಿಯತ್‌ನಾಮ್

# ಎಲೆ – ಅಡಕೆ

ಹಿಂದೆ ದೊರೆ ಹೂಂಗ್‌ವುಹಿಂಗ್ ರಾಜ್ಯವಾಳುತ್ತಿದ್ದಾಗ ಉತ್ತರ ವಿಯತ್‌ನಾಮ್‌ನ ಗುಡ್ಡಗಾಡಿನ ಒಂದು ಸಣ್ಣ ಹಳ್ಳಿಯಲ್ಲಿ ಕಾವೊ ಮನೆತನಕ್ಕೆ ಸೇರಿದ ಇಬ್ಬರು ಅಣ್ಣತಮ್ಮಂದಿರಿದ್ದರು. ಅವರಲ್ಲಿ ಹಿರಿಯುವನ ಹೆಸರು ಕಾವೊತಾನ್; ಕಿರಿಯುವನದು ಕಾವೊಲಾಂಗ್. ಅವರಿಬ್ಬರೂ ನೋಡಲು ಅವಳಿಜವಳಿಗಳಂತಿದ್ದರು. ಜತೆಗೆ ಒಳ್ಳೆಯ ರೂಪ, ಗುಣಗಳಿಂದ ಕೂಡಿದ್ದು ಕಷ್ಟಪಟ್ಟು ಕೆಲಸ ಮಾಡುತ್ತಿದ್ದರು.

ಪಕ್ಕದ ಹಳ್ಳಿಯಲ್ಲಿ ಲೂ ಮನೆತನಕ್ಕೆ ಸೇರಿದ ಕ್ಸುವಾನ್‌ಫೂ ಎಂಬ ಹೆಸರಿನ ಹುಡುಗಿಯೊಬ್ಬಳಿದ್ದಳು. ಕಿರಿಯುವನಾದ ಕಾವೊಲಾಂಗ್ ಅವಳನ್ನು ಗುಟ್ಟಾಗಿ ಪ್ರೀತಿಸತೊಡಗಿದ. ಅವಳಿಗೆ ಸುಮಾರು ಹದಿನಾರರ ಪ್ರಾಯ. ಅವಳು ತುಂಬ ಚೆಲುವೆಯಾಗಿದ್ದುದೇ ಅಲ್ಲದೆ ಸಾಧುಸ್ವಭಾವದವಳಾಗಿ ಒಳ್ಳೆಯ ಗುಣ ನಡತಗಳಿಂದ ಕೂಡಿದ್ದಳು. ಎಷ್ಟೋ ಜನ ಯುವಕರು ಅವಳ ಕೈಹಿಡಿಯಬಯಸಿದ್ದರು. ಆದರೆ ಅವಳು ಅವರಾರಿಗೂ ಗಮನ ಕೊಡದೆ, ಗುಟ್ಟಾಗಿ ಕಾವೊಲಾಂಗ್‌ನಿಗೆ ಒಲಿದಿದ್ದಳು.

ಒಂದು ದಿನ ಕಾವೊಲಾಂಗ್ ತನ್ನ ತಾಯಿಯ ಬಳಿ ಹೋಗಿ, ಸಂಕೋಚದಿಂದಲೇ ಮದುವೆಗೆ ಒಪ್ಪಿಗೆ ಕೇಳಿದ. ಆದರೆ ತಾನು ಯಾರನ್ನು ಮದುವೆಯಾಗಲು ಬಯಸಿದ್ದೇನೆಂದು ಹೇಳಲಿಲ್ಲ. "ಪದ್ಧತಿಯಂತೆ ಅಣ್ಣನ ಮದುವೆಯಾಗುವವರೆಗೂ ನೀನು ಕಾಯಬೇಕು," ಎಂದು ತಾಯಿ ಹೇಳಿದಳು. ಕಾವೊಲಾಂಗ್ ಕರ್ತವ್ಯನಿಷ್ಠ ಮಗ, ತಾಯಿಗೆ ಎದುರಾಡಲಿಲ್ಲ. ಈ ನಡುವೆ ಅಣ್ಣ—ಅವನು ಸಹ ಒಳ್ಳೆಯವನೇ — ಮದುವೆಗೆ ಯೋಗ್ಯಳಾದ ಹುಡುಗಿಯನ್ನು ಹುಡುಕತೊಡಗಿದ. ಒಬ್ಬಳು ಹುಡುಗಿಯನ್ನೂ ಆರಿಸಿದ.

ಅಣ್ಣ ಆರಿಸಿದ ಹುಡುಗಿ ಬೇರೆ ಯಾರೂ ಆಗಿರದೆ ಚೆಲುವೆ ಕ್ಸುವಾನ್‌ಫೂಳೇ ಆಗಿದ್ದಳು. ವಿಷಯ ತಿಳಿದಾಗ ಕಾವೊಲಾಂಗ್‌ನ ಎದೆ ದುಃಖದಿಂದ ತುಂಬಿತು. ಆದರೆ ಅಣ್ಣನ ಮೇಲೆ ತುಂಬ ಪ್ರೀತಿಯಿದ್ದುದರಿಂದ ಏನೂ ಹೇಳದೆ ಸುಮ್ಮನಿದ್ದುಬಿಟ್ಟ.

ಕಾವೊತಾನ್ ತಾಯಿಯೊಡನೆ ಹೆಣ್ಣು ಕೇಳಲು ಕ್ಸುವಾನ್‌ಫೂನ ಮನೆಗೆ ಬಂದ. ಕ್ಸುವಾನ್‌ಫೂ ಪ್ರೀತಿಸಿದ್ದುದು ಕಾವೊಲಾಂಗ್‌ನನ್ನು. ಆದರೆ ಅವಳು ಎಂದೂ ಅವನ





ಜತೆ ಮಾತಾಡಿರಲಿಲ್ಲ. ಅಣ್ಣತಮ್ಮಂದಿರಿಬ್ಬರೂ ಒಂದೇ ತರನಾಗಿದ್ದುದರಿಂದ ಅವಳು ಕಾವೊತಾನ್‌ನನ್ನೇ ಕಾವೊಲಾಂಗ್ ಎಂದು ತಪ್ಪುತಿಳಿದು ಅವನ ಕೈಹಿಡಿಯಲು ಒಪ್ಪಿಬಿಟ್ಟಳು. ಮದುವೆ ನಡೆದುಹೋಯಿತು.

ಕಾವೊಲಾಂಗ್ ದುಃಖ ತಾಳಿಕೊಂಡ. ಕ್ಸುವಾನ್‌ಫೂಳಿಗೆ ತಪ್ಪು ತಿಳಿದಾಗ 'ಇದು ದೈವೇಚ್ಛೆ' ಎಂದುಕೊಂಡು ಅದಕ್ಕೆ ಹೊಂದಿಕೊಂಡಳು. ಏನೇ ಇರಲಿ, ಅವಳ ಗಂಡನೂ ಕಾವೊಲಾಂಗ್‌ನಂತೆಯೇ ಚೆಲುವನೂ ಒಳ್ಳೆಯ ಸ್ವಭಾವದವನೂ ಆಗಿದ್ದು ಕಷ್ಟಪಟ್ಟು ಕೆಲಸ ಮಾಡುತ್ತಿದ್ದ.

ಕ್ಸುವಾನ್‌ಫೂ ಸ್ವಲ್ಪಸ್ವಲ್ಪವಾಗಿ ಅಡಿಗೆ ಮಾಡುವುದು, ಚಹ ತಯಾರಿಸುವುದು, ಮನೆಯನ್ನು ಓರಣವಾಗಿಡುವುದು ಮುಂತಾದ ಸಂಸಾರದ ಜವಾಬ್ದಾರಿಗಳನ್ನು ಅತ್ತೆಯಿಂದ ವಹಿಸಿಕೊಂಡಳು. ಪ್ರತಿನಿತ್ಯ ಅಣ್ಣತಮ್ಮಂದಿರು ಎಮ್ಮೆ ಹೊಡೆದುಕೊಂಡು ಹೊಲಕ್ಕೆ ಹೋಗುತ್ತಿದ್ದರು. ಸಂಜೆ ತಾನ್ ನೇಗಿಲು ಕುಂಟೆಗಳನ್ನು ಹೊತ್ತು ತರುತ್ತಿದ್ದ; ಲಾಂಗ್ ಅವನ ಹಿಂದೆ ಕೊಂಚ ದೂರದಲ್ಲಿ ನಿಧಾನವಾಗಿ ಎಮ್ಮೆ ನಡಸಿಕೊಂಡು ಬರುತ್ತಿದ್ದ. ರಾತ್ರಿ ಎಲ್ಲರೂ ಊಟಕ್ಕೆ ಕುಳಿತಾಗ ಅವರ ನಡುವೆ ಆತ್ಮೀಯವಾದ ಪ್ರೀತಿಸುಖಗಳ ಭಾವನೆ ಇರುತ್ತಿತ್ತು.

ಒಂದು ದಿನ ಸಂಜೆ ಕ್ಸುವಾನ್‌ಫೂ ರಾತ್ರಿಯ ಅಡಿಗೆ ಮುಗಿಸಿ ಗಂಡನನ್ನು ಎದುರುಗೊಳ್ಳಲು ಮನೆಯ ಬಾಗಿಲಿಗೆ ಬಂದಳು. ಆವೊತ್ತು ಲಾಂಗ್ ನೇಗಿಲು ಕುಂಟೆಗಳನ್ನು ಹಿಡಿದುಕೊಂಡು ಮುಂದೆ ಬರುತ್ತಿದ್ದ; ತಾನ್ ಹಿಂದಿನಿಂದ ಎಮ್ಮೆ ಹೊಡೆದುಕೊಂಡು ಬರುತ್ತಿದ್ದ. ದೂರದಿಂದ ಕ್ಸುವಾನ್‌ಫೂ ಕಾವೊಲಾಂಗ್‌ನನ್ನೇ ತನ್ನ ಗಂಡನೆಂದುಕೊಂಡು, ಓಡಿಬಂದು ಆತನ ಕೈ ಹಿಡಿದುಕೊಂಡಳು. ಅವಳು ತನ್ನನ್ನು ಗಂಡ ಎಂದು ತಪ್ಪು ತಿಳಿದುಕೊಂಡಳೆಂದು ಲಾಂಗ್‌ನಿಗೆ ಗೊತ್ತಾಯಿತು. ಅವನು 'ಅತ್ತಿಗೆ' ಎಂದು ಕರೆದ.

ತಾನು ಮುಟ್ಟಿದ್ದು ಗಂಡನನ್ನಲ್ಲ ಎಂದು ಅರಿವಾದಾಗ ಕ್ಸುವಾನ್‌ಫೂಳಿಗೆ ಗಾಬರಿಯಾಯಿತು. ದುರದೃಷ್ಟಕ್ಕೆ ಕಾವೊತಾನ್ ನಡೆದದ್ದನ್ನು ನೋಡಿಬಿಟ್ಟಿದ್ದ. ಅವನು ನೊಂದುಕೊಂಡು, ಹೆಂಡತಿಯನ್ನು ಮಾತು ಸಹ ಆಡಿಸದೆ ಮನೆಯೊಳಕ್ಕೆ ಹೋದ.

ಆವೊತ್ತಿನಿಂದ ಮನೆಯಲ್ಲಿ ಮೊದಲಿನ ಸುಖ ಮಾಯವಾಯಿತು. ಕಾವೊಲಾಂಗ್ ತಪ್ಪು ತನ್ನದೇ ಎಂದುಕೊಂಡ. ಸಂಸಾರದ ಒಳ್ಳೆಯದಕ್ಕೆ ತಾನು ಮನೆಬಿಟ್ಟು ಹೋಗುವುದೇ ಸರಿ ಎಂದು ನಿಶ್ಚಯಿಸಿ ಹೊರಟೇಬಿಟ್ಟ. ಅವನು ಎಲ್ಲಿ ಹೋದನೆಂದು ಯಾರೂ ಕಾಣರು. ಸ್ವತಃ ಅವನಿಗೂ ತಾನು ಎಲ್ಲಿ ಹೋಗುತ್ತಿ

ದ್ದೇನೆಂದು ತಿಳಿಯದು. ಬೇಸಿಗೆ ಕಳೆದು ಶರತ್ಕಾಲ ಬಂದಿತು, ಚಳಿಗಾಲ ಬಂದಿತು, ಮತ್ತೆ ವಸಂತ ಬಂದಿತು. ಅವನಿನ್ನೂ ಗುಡ್ಡಗಾಡುಗಳಲ್ಲಿ ಓಡಾಡುತ್ತ, ಹೊಳೆತೊರೆಗಳನ್ನು ದಾಟುತ್ತ, ಹಳ್ಳಿಯಿಂದ ಹಳ್ಳಿಗೆ ಅಲೆಯುತ್ತಿದ್ದ.



ಒಂದು ದಿನ ಸಂಜೆ ಅವನು ದಣಿವು ತಾಳಲಾರದೆ ಒಂದು ಹೊಳೆಯ ದಂಡೆಯ ಮೇಲೆ ಕುಸಿದು ಬಿದ್ದು ಸತ್ತ. ಅವನ ನಿಜವಾದ ಪ್ರೀತಿ, ಸ್ವಾರ್ಥತ್ಯಾಗಗಳಿಂದಾಗಿ ಅವನ ದೇಹ ಒಂದು ಅಪ್ಪಟ ಬಿಳಿಯ ಸುಣ್ಣದ ಬಂಡೆಯಾಗಿ ಬದಲಾಯಿತು. ಅದರ ಬದಿಯಲ್ಲಿ ಅವನ ದುರ್ಗತಿಗೆ ಮರುಗುತ್ತ ನದಿ ಹರಿಯುತ್ತಿತ್ತು.

ಆ ಕಡೆ ಮನೆಯಲ್ಲಿ, ತಮ್ಮ ಹಿಂದಿರುಗಿ ಬರಲಿಲ್ಲವಲ್ಲ ಎಂದು ಕಾವೊತಾನ್ ಕೊರಗತೊಡಗಿದ. ತಮ್ಮನನ್ನು ಹಾಗೇ ಹೋಗಲು ಬಿಟ್ಟದ್ದಕ್ಕೆ ಪಶ್ಚಾತ್ತಾಪಪಡುತ್ತ ಅವನನ್ನು ಹುಡುಕಿಕೊಂಡು ಹೊರಟ. ಕಣ್ಮರೆಯಾದ ತಮ್ಮನ ಕುರುಹು ಎಲ್ಲಾದರೂ ಸಿಕ್ಕೀತೇ ಎಂದು ಕಾಡುಮೇಡು, ಬೆಟ್ಟಗುಡ್ಡಗಳಲ್ಲೆಲ್ಲಾ ಅಲೆದಾಡಿದ. ಕೊನೆಗೆ ನದಿಯ ದಂಡೆಯ ಮೇಲಿದ್ದ ಆ ಬಿಳಿಯ ಸುಣ್ಣದ ಬಂಡೆಯ ಹತ್ತಿರ ಬಂದು, ಸುಸ್ತಾಗಿ ಅಲ್ಲೇ ಕುಸಿದುಬಿದ್ದು ಸತ್ತ. ತನ್ನ ನಿಷ್ಠೆಯಿಂದಾಗಿ ಅವನು ಒಂದು ಎತ್ತರದ ಅಡಕೆಯ ಮರವಾದ.

ಗಂಡ ಮನೆಬಿಟ್ಟು ಹೋದಮೇಲೆ ಕ್ವಿವಾನ್‌ಫೂ ಆಸೆಯಿಂದ ಅವನು ಹಿಂದಿರುಗಿ ಬರುವುದನ್ನೇ ಕಾಯುತ್ತ ಕುಳಿತಳು. ಗಂಡ ಮೈದುನರ ಸುದ್ದಿ ತಿಳಿಯದೆ ಎರಡು ವರ್ಷ ಕಳೆದವು. ಕೊನೆಗೆ ನಿರಾಶಳಾಗಿ ಒಂದು ದಿನ ಬೆಳಗಿನಲ್ಲಿ ಅತ್ತೆಯ ಅಪ್ಪಣೆ ಪಡೆದು ಅವಳೂ ಹೊರಟಳು. ಮಳೆಬಿಸಿಲೆನ್ನದೆ ತುಂಬ ದೂರ ದಾರಿ ನಡೆದಳು. ದೈವ ಅವಳನ್ನೂ ಸುಣ್ಣದ ಬಂಡೆಯ ಬದಿ ಬೆಳೆದಿದ್ದ ಅಡಿಕೆಮರದ ಬಳಿಗೇ ಕರೆತಂದಿತು. ಅಲ್ಲಿಗೆ ಬರುತ್ತಲೇ ಶಕ್ತಿಗುಂದಿ ಕುಸಿದುಬಿದ್ದು ಸತ್ತಳು. ಕ್ವಿವಾನ್‌ಫೂ ವೀಳೆಯದೆಲೆಯ ಬಳ್ಳಿಯಾಗಿ ಅಡಿಕೆಮರದ ಕಾಂಡಕ್ಕೆ ಹಬ್ಬಿಕೊಂಡು ಬೆಳೆದಳು. ಹೀಗೆ ಅವಳು ಮತ್ತೊಮ್ಮೆ ಗಂಡನನ್ನು ಕೂಡಿಕೊಂಡಳು.

ಸುಣ್ಣದ ಬಂಡೆಯ ಬದಿ, ನದಿ ಇವರ ದಾರುಣ ಕಥೆಯನ್ನು ಮರ್ಮರ ಧ್ವನಿಯಲ್ಲಿ ಸಾರುತ್ತ ಹರಿಯುತ್ತಿತ್ತು. ಅದನ್ನು ಕೇಳಿದ ಹಳ್ಳಿಯ ಜನ ಆ ಮೂವರ ನೆನಪಿಗಾಗಿ ಅಲ್ಲಿ ಒಂದು ಗುಡಿ ಕಟ್ಟಿಸಿದರು. ಒಂದು ದಿನ ದೊರೆ ಹೂಂಗ್‌ವುಓಂಗ್ ಆ ದಾರಿಯಲ್ಲಿ ಬಂದ. ಜನರ ಬಾಯಿಂದ ಆ ಕಥೆ ಕೇಳಿದ. ಕ್ವಿವಾನ್

ಘೂ ಮತ್ತು ಆ ಅಣ್ಣ-ತಮ್ಮಂದಿರ ಪ್ರೀತಿಗೆ ಕರಗಿ, ದೊರೆ ಒಂದು ವೀಳೆಯದೆಲೆ ಅಡಕೆಗಳನ್ನು ಕಿತ್ತು, ಎರಡನ್ನೂ ಒಟ್ಟಿಗೆ ತಿಂದ. ಅವುಗಳ ಜೋಡಿ ತುಂಬ ಸುವಾಸನೆಯದಾಗಿತ್ತು. ಅದನ್ನು ಸುಣ್ಣವ ಬಂಡೆಯ ಮೇಲೆ ಉಗುಳಿದಾಗ ಮನೋಹರವಾದ ಕೆಂಪು ಬಣ್ಣಕ್ಕೆ ತಿರುಗಿತು. ಆ ಕೆಂಪು ಬಣ್ಣ ನಿಷ್ಕಲ ಪ್ರೀತಿಯ ಬಣ್ಣ.



ದೊರೆ ಎಲೆ-ಅಡಕೆ-ಸುಣ್ಣಗಳನ್ನು ಮದುವೆಯ ಸಮಾರಂಭದಲ್ಲಿ ತಪ್ಪದೆ ಬಳಸಬೇಕೆಂದು ಅಪ್ಪಣೆ ಮಾಡಿದ. ಎಂತಲೇ ಈವೊತ್ತಿನವರೆಗೂ ಹಾಗೆಯೇ ನಡೆಯುತ್ತಿದೆ. ಜನ ಅಡಕೆ ಕತ್ತರಿಸಿ, ಕೊಂಚ ಸುಣ್ಣದೊಂದಿಗೆ ಬೆರಸಿ, ವೀಳೆಯದೆಲೆಯಲ್ಲಿ ಸುತ್ತಿ ತಿನ್ನುತ್ತಾರೆ.

ಹೇಳಿದವರು: **ಹೊವಾಂಗ್ ಗೋಕ್‌ಬಿಯೆನ್**
ಚಿತ್ರಗಳು: **ಗುಯೆನ್ ಥೀಹೊಪ್**



ಇಂಡೊನೇಷಿಯಾ

# ಬತ್ತದ ಕಥೆ

ಒಮ್ಮೆ ದೇವತೆಗಳ ದೇವ, ಮಹಾದೇವ ಬಟಾರ ಗುರು ಒಂದು ಹೊಸ ಅರಮನೆ ಕಟ್ಟಿಸುತ್ತಿದ್ದ. ಆ ಅರಮನೆಯ ತಳಪಾಯಕ್ಕೆ ಹಾಕಲು ಸ್ವರ್ಗಲೋಕದ ದೇವತೆಗಳೆಲ್ಲರೂ ಒಂದೊಂದು ಕಲ್ಲು ತಂದುಕೊಡಬೇಕೆಂದು ಹೇಳಿಕಳಿಸಿದ. ನಾಗದೇವತೆಯ ಹೊರತು ಉಳಿದೆಲ್ಲ ದೇವತೆಗಳೂ ಆ ಆಜ್ಞೆ ಪಾಲಿಸುವುದಾಗಿ ಮಾತುಕೊಟ್ಟರು. ದೇವದೂತ ನಾಗದೇವತೆಯ ಬಳಿಗೆ ಬಂದಾಗ ಅದು ದುಃಖದಿಂದ ತಲೆಯಲ್ಲಾಡಿಸುತ್ತ "ನನಗೆ ಕೈಯಿಲ್ಲ, ಕಾಲಿಲ್ಲ ಅಂತ ನಿನಗೇ ಗೊತ್ತಿದೆ. ನನಗೆ ಹೇಗೆ ತಾನೆ ಕಲ್ಲು ಹೊರೋಕ್ಕಾಗುತ್ತೆ, ಹೇಳು," ಅಂದಿತು. ಅದು ಹಾಗನ್ನುವಾಗ ಅದರ ಕಣ್ಣಿಂದ ಮೂರು ತೊಟ್ಟು ಕಣ್ಣೀರು ಉರುಳಿತು. ಕಣ್ಣೀರು ನೆಲಕ್ಕೆ ಬಿದ್ದಾಗ, ಒಂದೊಂದು ತೊಟ್ಟೂ ಒಂದೊಂದು ಬಿಳಿಯ ಮೊಟ್ಟೆಯಾಯಿತು. "ಈ ಮೊಟ್ಟೆಗಳನ್ನು ಬಟಾರ ಗುರುವಿನ ಬಳಿಗೆ ಕೊಂಡುಹೋಗಿ, ಏನು ನಡೆಯಿತೆಂದು ನೀನೇ ಹೇಳು", ಎಂದು ದೇವದೂತ ನಾಗದೇವತೆಗೆ ಹೇಳಿದ.

ನಾಗದೇವತೆ ಮೂರು ಮೊಟ್ಟೆಗಳನ್ನೂ ಜೋಪಾನವಾಗಿ ಬಾಯಲ್ಲಿ ಕಚ್ಚಿಕೊಂಡು, ಬಟಾರ ಗುರುವಿನ ಅರಮನೆಯ ದಾರಿಹಿಡಿದು ಹೊರಟಿತು. ದಾರಿಯಲ್ಲಿ ಗರುಡದೇವತೆ ಎದುರಾಯಿತು. "ಎಲ್ಲಿ ಹೊರಟಿದೆ, ನಾಗದೇವತೆಗಳ ಸವಾರಿ?" ಎಂದು ಕೇಳಿತು ಗರುಡದೇವತೆ. ಆದರೆ ನಾಗದೇವತೆಯ ಬಾಯಿಯ



ತುಂಬ ಮೊಟ್ಟೆ ಇದ್ದದ್ದರಿಂದ ಅದಕ್ಕೆ ಉತ್ತರ ಕೊಡಲಾಗಲಿಲ್ಲ. ಗರುಡದೇವತೆ ಮತ್ತೆ ಎರಡು ಸಲ ಅದೇ ಪ್ರಶ್ನೆ ಕೇಳಿತು. ನಾಗದೇವತೆ ಉತ್ತರ ಕೊಡದಿದ್ದುದನ್ನು ನೋಡಿ ಅದಕ್ಕೆ ತುಂಬ ಕೋಪ ಬಂದಿತು. ಅದು ನಾಗದೇವತೆಯ ತಲೆಯನ್ನು ಕುಕ್ಕತೊಡಗಿತು. ನಾಗದೇವತೆ ನೋವು ತಡೆಯಲಾಗದೆ ಎರಡು ಸಲ ಜೋರಾಗಿ ಅರಚಿತು. ಒಂದೊಂದು ಸಲ ಅರಚಿದಾಗಲೂ ಅದರ ಬಾಯಿಂದ ಒಂದೊಂದು ಮೊಟ್ಟೆ ಕೆಳಕ್ಕೆ ಉರುಳಿತು.

ಮೊಟ್ಟೆಗಳು ನೆಲಕ್ಕೆ ತಗಲಿದಾಗ ಒಡೆದು, ಒಂದೊಂದರಿಂದಲೂ ಒಂದೊಂದು ಮರಿಹಂದಿ ಹೊರ ಬಂದಿತು. ಆ ಮರಿಹಂದಿಗಳನ್ನು ಒಂದು ಹಸು ಸಾಕಿಕೊಂಡು ತನ್ನ ಕರುವಿನೊಂದಿಗೆ ಬೆಳಸತೊಡಗಿತು. ಕರುವಿನ ಹೆಸರು ಲೇಬು ಗುಮರಾಂಗ್. ಅದು ಬೆಳೆದು, ಮಂತ್ರಶಕ್ತಿ ಪಡೆದ ಒಂದು ದುಷ್ಟ ಹೋರಿಯಾಗಿ ದೇವತೆಗಳಿಗೂ ಮನುಷ್ಯರಿಗೂ ಶತ್ರುವಾಯಿತು.

ನಾಗದೇವತೆ ಎರಡು ಮೊಟ್ಟೆಗಳನ್ನು ಕಳೆದುಕೊಂಡರೂ ಅದೃಷ್ಟವಶಾತ್ ಮೂರನೆಯದು ಅದರ ಬಾಯಿಯಲ್ಲಿಯೇ ಉಳಿದಿತ್ತು. ನಾಗದೇವತೆ ಅದನ್ನು ಮಹಾದೇವ ಬಟಾರ ಗುರುವಿನಲ್ಲಿಗೆ ತಂದು ಅರ್ಪಿಸಿ, ನಡೆದುದೆಲ್ಲವನ್ನೂ ವಿವರಿಸಿತು. "ಈ ಮೊಟ್ಟೆ ಒಡೆದು ಮರಿಯಾಗುವವರೆಗೂ ಇದು ನಿನ್ನಲ್ಲೇ ಇರಲಿ. ಇದರಿಂದ ಏನು ಹುಟ್ಟುವುದೊ ಅದನ್ನು ನನಗೆ ತಂದುಕೊಡು." ಎಂದು ಬಟಾರ ಗುರು ನಾಗ ದೇವತೆಗೆ ಅಪ್ಪಣೆ ಮಾಡಿದ.

ನಾಗದೇವತೆ ಮೊಟ್ಟೆಯನ್ನು ಮನೆಗೆ ಕೊಂಡೊಯ್ದು ಜೋಪಾನವಾಗಿ ನೋಡಿಕೊಂಡಿತು. ಕೊನೆಗೆ, ಒಂದು ತಿಂಗಳ ನಂತರ, ಮೊಟ್ಟೆ ಒಡೆದು ಅದರಿಂದ ಒಂದು ಚೆಲುವಾದ ಪುಟ್ಟ ಹೆಣ್ಣುಮಗು ಹುಟ್ಟಿ ಬಂದಿತು. ನಾಗದೇವತೆ ತಡಮಾಡದೆ ಆ ಮಗುವನ್ನು ಮಹಾದೇವನಲ್ಲಿಗೆ ತಂದು ಅರ್ಪಿಸಿತು. ಮಹಾ ದೇವ ಆ ಮಗುವನ್ನು ತನ್ನ ಮಗಳೆಂದೇ ಸ್ವೀಕರಿಸಿ ಅದಕ್ಕೆ ದೇವಿಶ್ರೀ ಎಂದು ಹೆಸರಿಟ್ಟ. ಆ ಹುಡುಗಿ ಮಹಾದೇವನ ಮಗಳಿಗೆ ಸಲ್ಲುವಷ್ಟು ಪ್ರೀತಿ ಪಡೆದು ಅರಮನೆಯಲ್ಲಿ ರಾಜಕುಮಾರಿಯಂತೆ ಬೆಳೆದಳು.

ದಿನ ಕಳೆದಂತೆ ದೇವಿಶ್ರೀ ಸುಂದರ ಯುವತಿಯಾದಳು. ಅವಳು ಚೆಲುವಾಗಿದ್ದಷ್ಟೇ ಮೃದುಸ್ವಭಾವ ದವಳೂ ಆಗಿದ್ದು, ಎಲ್ಲರ ಪ್ರೀತಿಯನ್ನೂ ಸಂಪಾದಿಸಿದಳು. ಸ್ವತಃ ಮಹಾದೇವನೇ ಅವಳ ಬಗ್ಗೆ ತೋರಿಸು ತ್ತಿದ್ದ ಪ್ರೀತಿಯನ್ನು ನೋಡಿ ಉಳಿದ ದೇವತೆಗಳು ಅವನೆಲ್ಲಿ ಅವಳನ್ನು ಮದುವೆಯಾಗ ಬಯಸುವನೋ ಎಂದು ಹೆದರಿದರು. ಧರ್ಮಶಾಸ್ತ್ರದ ಪ್ರಕಾರ, ಒಬ್ಬ ತಂದೆ ತನ್ನ ಮಗಳನ್ನು—ಅವನು ಸ್ವತಃ ದೇವರೇ ಆದರೂ, ಅವಳು ಅವನ ಸಾಕುಮಗಳೇ ಆದರೂ—ಮದುವೆಯಾಗುವಂತಿರಲಿಲ್ಲ. ಧರ್ಮಭಂಗವಾದರೆ ಇಡೀ ನಾಡೇ ಹಾಳಾಗುವುದೆಂದು ದೇವತೆಗಳು ಹೆದರಿದರು. ಅದ್ದರಿಂದ ಅವರು ಗುಟ್ಟಾಗಿ ಸೇರಿ, ದೇವಿಶ್ರೀ ಯನ್ನು ಕೊಲ್ಲುವುದೆಂದು ನಿಶ್ಚಯಿಸಿದರು. ಆ ನಿರ್ಧಾರದಿಂದ ಅವರಿಗೆ ದುಃಖವಾಯಿತು. ಆದರೆ ರಾಜ್ಯ ವನ್ನು ಉಳಿಸಲು ಅದೊಂದೇ ಮಾರ್ಗವೆಂದು ಅವರು ಯೋಚಿಸಿದರು.

ದೇವತೆಗಳು ದೇವಿಶ್ರೀಗೆ ಪ್ರಿಯವಾದ ಹಣ್ಣಿನಲ್ಲಿ ವಿಷ ಬೆರಸಿ ತಿನ್ನಲು ಕೊಟ್ಟರು. ಅದನ್ನು ತಿಂದ ತಕ್ಷಣ ಅವಳಿಗೆ ಆರೋಗ್ಯ ಕೆಟ್ಟಿತು. ದಿನ ಕಳೆದಂತೆ ಅವಳು ಹೆಚ್ಚು ಹೆಚ್ಚು ನಿಶ್ಶಕ್ತಳಾಗಿ ಕೊನೆಗೆ ಸತ್ತು ಹೋದಳು. ದೇವಿಶ್ರೀಯ ದೇಹವನ್ನು ರಾಜಮರ್ಯಾದೆಯೊಂದಿಗೆ ಮೂರಂತಸ್ತಿನ ಪಗೋಡದ ಬಳಿ ಹೂಳಲಾಯಿತು. ಅವಳ ಸಮಾಧಿಯ ಬಳಿ ಕಾವಲಿದ್ದು, ಅದರ ಸುತ್ತ ದಿನವೂ ನೀರು ಹಾಕಿ ಹೂ ಬೆಳೆಯು ವಂತೆ ನೋಡಿಕೊಳ್ಳಲು ಒಬ್ಬ ಸೇವಕನನ್ನು ಗೊತ್ತುಮಾಡಲಾಯಿತು.



ಆ ಸಮಾಧಿಯಿಂದ ಹಿಂದೆಂದೂ ಯಾರೂ ಕಾಣದ ಒಂದು ವಿಚಿತ್ರವಾದ ಸಸಿ ಹೊರಟಿಕೊಂಡಿತು. ಅದೇ ನಾವು ಬತ್ತವೆಂದು ಕರೆಯುವ ಸ್ವರ್ಗಲೋಕದ ಗಿಡ. ಅದು ಬಹು ಬೇಗ ದೊಡ್ಡದಾಗಿ ಬೆಳೆದು ತೆನೆ ತುಂಬಿಕೊಂಡಿತು. ತೆನೆ ಹಳದಿ ಬಣ್ಣಕ್ಕೆ ತಿರುಗಿ ತುಂಬ ಬತ್ತದ ಕಾಳು ಕೊಟ್ಟಿತು.

ಈ ಅದ್ಭುತವನ್ನು ಕಂಡ ಮಹಾದೇವ ತನ್ನ ಆಳುಗಳಿಗೆ ಆ ಬತ್ತದ ಬೀಜಗಳನ್ನು ಭೂಮಿಗೆ ಒಯ್ದು, ಪಜಾಜಾರನ್ ರಾಜ್ಯದ ದೊರೆಗೆ ಕೊಡುವಂತೆ ಹೇಳಿದ. "ಇವು ನನ್ನ ಉಡುಗೊರೆಯೆಂದು ಹೇಳು. ಅವನ ಪ್ರಜೆಗಳು ಇವನ್ನು ನೆಟ್ಟು ಚೆನ್ನಾಗಿ ನೋಡಿಕೊಳ್ಳಲಿ. ಅನಂತರ ಯಾರೂ ಹಸಿವಿನಿಂದ ನರಳಬೇಕಾಗಿಲ್ಲ. ಯಾಕೆಂದರೆ ಇದು ಬದುಕಿನ ಆಹಾರ," ಅಂದ.

ಪಜಾಜಾರನ್ ದೊರೆ ಸ್ವರ್ಗದಿಂದ ಬಂದ ಅದ್ಭುತವಾದ ಆ ಉಡುಗೊರೆಯನ್ನು ಕೊಂಡು ಸಂತೋಷ ಪಟ್ಟ. ತನ್ನ ಪ್ರಜೆಗಳಿಗೆ ಆ ಬತ್ತವನ್ನು ಹಂಚಿದ. ಮಹಾದೇವನ ಒಬ್ಬ ಸೇವಕ ಭೂಲೋಕದ ಜನರಿಗೆ ಗದ್ದೆಗಳಲ್ಲಿ, ಬೆಟ್ಟದ ಬದಿಯ ಮಾಳಿಗೆಗಳಲ್ಲಿ ಬೀಜ ನೆಟ್ಟು, ಬೆಳೆ ಬೆಳೆದು, ಫಸಲು ಕೊಯ್ದು ಒಕ್ಕುವುದು ಹೇಗೆಂದು ತೋರಿಸಿಕೊಟ್ಟ. ಆಮೇಲೆ ಸ್ವರ್ಗಲೋಕದಿಂದ ಒಬ್ಬ ದೇವತೆ ಬಂದು ಭೂಮಿಯ ಹೆಣ್ಣು ಮಕ್ಕಳಿಗೆಲ್ಲಾ ಅನ್ನಮಾಡಿ, ಅದನ್ನು ಹಲವು ಬಗೆಯಲ್ಲಿ ರುಚಿಕಟ್ಟಾಗಿ ಬಡಿಸುವುದನ್ನು ಕಲಿಸಿಕೊಟ್ಟಳು. ಆಗಿನಿಂದ ಪಜಾಜಾರನ್ ನಾಡಿನ ಜನರಿಗೆ ಅನ್ನದ ಕೊರತೆಯಿರಲಿಲ್ಲ. ಅವರು ಬಹಳ ಕಾಲ ಸುಖಶಾಂತಿಗಳಿಂದ ಇದ್ದರು.

ಒಂದು ದಿನ ಪರದೇಶದ ಒಬ್ಬ ದುಷ್ಟ ವರ್ತಕ ಪಜಾಜಾರನ್ ನಾಡಿಗೆ ವ್ಯಾಪಾರಕ್ಕಾಗಿ ಬಂದ. ಅದ್ಭುತವಾದ ಅನ್ನವನ್ನು ನೋಡಿ, ಅದರ ರುಚಿ ಸವಿದು, ಇದ್ದ ಬತ್ತವೆಲ್ಲವನ್ನೂ ಬೆಲೆಗೆ ಕೊಂಡು ತನ್ನ

ಜತೆ ಕೊಂಡೊಯ್ಯಲು ಇಚ್ಛಿಸಿದ. ಆದರೆ ದೊರೆ, "ನಿಜವಾಗಿ ಈ ಬತ್ತ ನಮ್ಮ ಸ್ವತ್ತಲ್ಲ, ಸ್ವರ್ಗಲೋಕದ್ದು. ದೇವಿಶ್ರೀಯ ಸಮಾಧಿಯಿಂದ ಬಂದದ್ದು. ಇದನ್ನು ನಾವು ಮಾರುವಂತಿಲ್ಲ" ಅಂದ. ವರ್ತಕನಿಗೆ ಕೋಪ ಬಂತು. ಅವನು ಗೂಳಿಯಾಗಿ ಬೆಳೆದಿದ್ದ ಲೆಂಬು ಗುಮರಾಂಗ್‌ನ ಗವಿಗೆ ಹೋಗಿ, ಪಜಾಜಾರನ್ ನಾಡಿನಲ್ಲಿದ್ದ ಬತ್ತವೆಲ್ಲವನ್ನೂ ಹಾಳುಮಾಡುವಂತೆ ಕೇಳಿಕೊಂಡ.

ಗೂಳಿ ತಕ್ಷಣ ಕೆಲಸಕ್ಕೆ ತೊಡಗಿತು. ಅದು ಒಂದು ದೊಡ್ಡ ಸುಂಟರಗಾಳಿಯನ್ನು ಸೃಷ್ಟಿಸಿತು. ಸುಂಟರಗಾಳಿ ಬತ್ತದ ಸಸಿಗಳೆಲ್ಲವನ್ನೂ ನೆಲಕ್ಕೆ ಉರುಳಿಸಿತು. ಇದನ್ನು ನೋಡಿದ ಮಹಾದೇವ ಬತ್ತವನ್ನು ರಕ್ಷಿಸಲೆಂದು ಸುಲಾಂಜನನೆಂಬ ಒಬ್ಬ ಯುವದೇವತೆಯನ್ನು ಕಳಿಸಿಕೊಟ್ಟ. ಸುಲಾಂಜನ ಸುಂಟರಗಾಳಿಯನ್ನು ಊದಿ ಅಟ್ಟಿದ. ಬತ್ತದ ಸಸಿಗಳನ್ನು ಮತ್ತೆ ಎತ್ತಿ ನಿಲ್ಲಿಸಿದ.

ಆಗ ದುಷ್ಟ ಗೂಳಿ ಬತ್ತವನ್ನು ನಾಶಮಾಡಲು ತನ್ನ ಸಾಕುತಮ್ಮಂದಿರಾದ ಹಂದಿಮರಿಗಳ ಸಹಾಯ ಬೇಡಿತು. ಹಂದಿಮರಿಗಳು ಈಗ ಪ್ರಚಂಡವಾಗಿ ಬೆಳೆದಿದ್ದವು. ಸುಲಾಂಜನದೇವತೆಗೂ ಅವುಗಳಿಗೂ ಘೋರಯುದ್ಧವಾಯಿತು. ಬತ್ತವನ್ನು ತುಳಿದುಹಾಕಲು ಹಂದಿಗಳು ನೂರಾರು ಕಾಡುಹಂದಿಗಳನ್ನು ಕರೆತಂದವು. ಆದರೆ ಸುಲಾಂಜನ ದಟ್ಟವಾಗಿ ಮಂಜು ಸುರಿಸಿ, ಆ ಹಂದಿಗಳಿಗೆ ದಾರಿಕಾಣದಂತೆ ಮಾಡಿದ. ಆಗ ಹಂದಿಗಳು ಬತ್ತದ ಸಸಿಗಳನ್ನು ತಿಂದುಹಾಕಲು ಸಾವಿರಾರು ಇಲಿಗಳನ್ನು ಕಳಿಸಿದವು. ಸುಲಾಂಜನ ಅವುಗಳ ದಾರಿಯಲ್ಲಿ ವಿಷವಿಟ್ಟ. ಇಲಿಗಳೆಲ್ಲವೂ ಸತ್ತುಬಿದ್ದವು. ಈ ಸಲ ಹಂದಿಗಳು ಲಕ್ಷಾಂತರ ಪಕ್ಕಿಗಳನ್ನು ಕಳಿಸಿಕೊಟ್ಟವು. ಸುಲಾಂಜನ ಮಂತ್ರ ಹಾಕಿ ಪಕ್ಕಿಗಳನ್ನು ಹೆದರಿಸಿ ಕಳಿಸಿದ.

ಕೊನೆಗೆ ದುಷ್ಟ ಗೂಳಿ ಅರಣ್ಯದ ಕಾಡುಪ್ರಾಣಿಗಳೆಲ್ಲವನ್ನೂ ಕರೆದು, ಆ ನಾಡಿನ ಹಳ್ಳಿಪಟ್ಟಣಗಳೆಲ್ಲವನ್ನೂ ನಾಶಮಾಡುವಂತೆ ಹೇಳಿದ. ಆಗ ನಾಡಿನ ಜನರೆಲ್ಲರೂ ಮಕ್ಕಳುಮರಿ ಸಮೇತ ಸುಲಾಂಜನನ ಜತೆಗೂಡಿ ಕಾದಾಡಿದರು. ಅವನ ಮುಖಂಡತ್ವದಲ್ಲಿ ಅವರು ಹಳ್ಳಗಳನ್ನು ತೋಡಿ ಅಲ್ಲಿ ಬೋನುಗಳನ್ನಿಟ್ಟರು. ಮರದ ಮೇಲೆಲ್ಲಾ ಬಲೆಯೊಡ್ಡಿದರು.

ಇದ್ದಕ್ಕಿದ್ದಂತೆ ದುಷ್ಟ ಗೂಳಿಯ ಮುಖಂಡತ್ವದಲ್ಲಿ ಕಾಡುಪ್ರಾಣಿಗಳ ಸೇನೆ ಕಾಡಿನ ಕಡೆಯಿಂದ ನುಗ್ಗಿಬಂದಿತು. ಆದರೆ ಅವುಗಳಲ್ಲಿ ಹಲವು ಬೋನಿನಲ್ಲಿ ಸಿಕ್ಕಿಬಿದ್ದವು. ಮತ್ತೆ ಹಲವು ಬಲೆಗೆ ಬಿದ್ದವು. ಗೂಳಿಗೆ ತನ್ನ ಸೇನೆ ಸೋಲುತ್ತಿರುವುದು ಅರಿವಾದರೂ ಅದು ಶರಣಾಗಲು ಸಿದ್ಧವಿರಲಿಲ್ಲ. ಅದು ಅರಚಿತು, "ಸುಲಾಂಜನ, ನಾನು ಸೋತೆನೆಂದು ತಿಳಿಯಬೇಡ. ಬಾ, ಧೈರ್ಯವಿದ್ದರೆ ನನ್ನೊಡನೆ ಕಾದಾಡು. ಯಾರು ಹೆಚ್ಚು ಬಲಶಾಲಿಯೆಂದು ಆಗ ತಿಳಿಯುತ್ತದೆ."

ಸುಲಾಂಜನ ಗೂಳಿಯ ಸವಾಲನ್ನು ಎದುರಿಸಲು ಧೈರ್ಯದಿಂದ ಮುಂದೆ ಬಂದ. ತೊಡೆ ತಟ್ಟಿ ಗೂಳಿ ಮೈಮೇಲೆ ಬೀಳುವುದನ್ನೇ ಕಾಯುತ್ತ ನಿಂತ. ದುಷ್ಟ ಗೂಳಿ ಒಂದು ಮರದ ಕಾಂಡದ ಮೇಲೆ ಕೊಂಬುಗಳನ್ನು ಮಸೆದು, ಪ್ರಚಂಡ ವೇಗದಿಂದ ಸುಲಾಂಜನನತ್ತ ನುಗ್ಗಿಬಂದಿತು. ಸುಲಾಂಜನ ಕಡೆಯಗಳಿಗೆಯಲ್ಲಿ ಥಟ್ಟನೆ ಪಕ್ಕಕ್ಕೆ ನೆಗೆದು, ನುಗ್ಗಿಬರುತ್ತಿದ್ದ ಗೂಳಿಗೆ ಕಾಲುಚಾಚಿ ತೊಡರುಕೊಟ್ಟು ಬೀಳಿಸಿದ. ಅದು ನೆಲಕ್ಕೆ ಮುಗ್ಗರಿಸಿತು. ಆದರೆ ತಕ್ಷಣ ಎದ್ದುನಿಂತು, ಮತ್ತೆ ನುಗ್ಗಿತು. ಸುಲಾಂಜನ ಪುನಃ ಅದನ್ನು ಬೀಳಿಸಿದ. ಒಂದೊಂದು ಸಲ ಗೂಳಿ ನುಗ್ಗಿಬಂದಾಗಲೂ ಸುಲಾಂಜನ ಅದನ್ನು ಚುರುಕಾಗಿ ಎದುರಿಸಿದ. ಕಟ್ಟಕಡೆಗೆ, ಸುಲಾಂಜನ ಅದರ ಒಂದು ಕಾಲು ಹಿಡಿದೆತ್ತಿ ಅದನ್ನು ಅಂತರಿಕ್ಷದಲ್ಲಿ ಗರಗರನೆ ತಿರುಗಿಸಿದ. ಗೂಳಿ ನೋವು ತಡೆಯಲಾರದೆ ಜೀವದಾನ ಮಾಡೆಂದು ಗೋಗರೆಯಿತು. ಅದೂ ದುಷ್ಟ ಹಂದಿಗಳೂ

ಸದಾಕಾಲ ಬತ್ತದ ಗದ್ದೆಗಳನ್ನು ಕಾವಲು ಕಾಯುವುದಾಗಿ ಮಾತು ಕೊಟ್ಟರೆ ಜೀವವುಳಿಸುವುದಾಗಿ ಸುಲಾಂಜನ ಹೇಳಿದ. ಅಂದಿನಿಂದ ಇಂದಿನವರೆಗೂ ಪಜಾಜಾರನ್ ನಾಡಿನ ಜನ ಬದುಕಿನ ಆಹಾರವಾದ ರುಚಿಕರವಾದ ಅನ್ನವನ್ನು ಉಣ್ಣುತ್ತ ಸುಖಶಾಂತಿಗಳಲ್ಲಿ ಬದುಕಿದ್ದಾರೆ.

ಹೇಳಿದವರು: **ಅತಿಕೆ. ಕರ್ತಾಹದಿಮಡ್ಜ**

ಚಿತ್ರಗಳು: **ಎ. ವಾಕ್‌ಜನ್**



ಜಪಾನು

# ಚಿತ್ರದ ಹೆಂಡತಿ

ಒಂದಾನೊಂದು ಕಾಲದಲ್ಲಿ ಗೋಂಬೆಯಿ ಎಂಬ ಒಬ್ಬ ಮನುಷ್ಯನಿದ್ದ. ಅವನು ಬಡವ. ಜತೆಗೆ ಅವನ ಬುದ್ಧಿಯೂ ಮಂದವಾಗಿತ್ತು. ಅವನು ತನ್ನ ಗುಡಿಸಲಿನಲ್ಲಿ ಒಂಟಿಯಾಗಿ ವಾಸಮಾಡಿಕೊಂಡಿದ್ದ. ಅವನು ಸರಳ ಸ್ವಭಾವದವನಾದ್ದರಿಂದ ಅವನನ್ನು ಯಾರೂ ಮದುವೆಯಾಗಲು ಒಪ್ಪುತ್ತಿರಲಿಲ್ಲ.

ಒಂದು ದಿನ ಸಂಜೆ ಪ್ರಾಯದ ಹೆಂಗಸೊಬ್ಬಳು ಅವನ ಮನೆಬಾಗಿಲಿಗೆ ಬಂದು ಆ ರಾತ್ರಿ ಅಲ್ಲಿ ಕಳೆಯಲು ಅಪ್ಪಣೆ ಕೇಳಿದಳು. ಗೋಂಬೆಯಿ ಹಿಂದೆಂದೂ ಅಂತಹ ಚೆಲುವೆಯನ್ನು ಕಂಡಿರಲಿಲ್ಲವಾದ್ದರಿಂದ ಸಂತೋಷದಿಂದ ಒಪ್ಪಿದ. ರಾತ್ರಿ ಊಟವಾದ ಮೇಲೆ ಆ ಹೆಂಗಸು, "ನೀನು ಇಲ್ಲಿ ಒಂಟಿಯಾಗಿ ವಾಸವಾಗಿರುವಂತೆ ಕಾಣುತ್ತೆ, ನಾನೂ ಒಬ್ಬಂಟಿಗಳೇ. ನನ್ನನ್ನು ಮದುವೆಯಾಗ್ತೀಯಾ?" ಎಂದು ಕೇಳಿದಳು. ಗೋಂಬೆಯಿಗೆ ತನ್ನ ಅದೃಷ್ಟವನ್ನು ತಾನೇ ನಂಬಲಾಗಲಿಲ್ಲ. ಅವರಿಬ್ಬರೂ ಮದುವೆಯಾದರು.

ಗೋಂಬೆಯಿಗೆ ಮದುವೆಯಾದ ಮೇಲೆ ತುಂಬ ಸುಖ ಸಿಕ್ಕಿತು. ಅಷ್ಟೇ ಅವನಿಗೆ ಕೆಲಸ ಮಾಡುವುದೂ ಕಷ್ಟವಾಯಿತು. ಅವನು ತನ್ನ ಪ್ರಾಯದ ಹೆಂಡತಿಯನ್ನು ಎಷ್ಟರಮಟ್ಟಿಗೆ ಪ್ರೀತಿಸುತ್ತಿದ್ದನೆಂದರೆ ಒಂದು ಕ್ಷಣ ಸಹ ಅವಳ ಮುಖ ನೋಡದೆ ಇರಲು ಆಗುತ್ತಿರಲಿಲ್ಲ. ಅವನ ಗಮನ ಕೆಲಸದ ಬದಲು ಹೆಂಡತಿಯ ಮೇಲಿರುತ್ತಿತ್ತು. ಹೀಗಾಗಿ ಅವನು ಹುಲ್ಲಿನಿಂದ ಜೋಡು ಹೆಣೆಯಲು ಕೂತರೆ ಅದು ಅವನಿಗೆ ಗೊತ್ತಾಗದಂತೆ ಐದಾರು ಅಡಿ ಉದ್ದವಾಗಿಬಿಡುತ್ತಿತ್ತು. ಹುಲ್ಲಿನ ಮಳೆಯಂಗಿ ಮಾಡಲು ತೊಡಗಿದರೆ ಅದು ಹತ್ತಿಪ್ಪತ್ತು ಅಡಿ ಉದ್ದವಾಗಿರುತ್ತಿತ್ತು. ಅವನು ಮಾಡಿದ ಜೋಡು, ಮಳೆಯಂಗಿಗಳನ್ನು ಯಾರೂ ತೊಡಲಾಗುತ್ತಿರಲಿಲ್ಲ. ಹೊಲಕ್ಕೆ ಕೆಲಸಕ್ಕೆ ಹೋದರೆ, ಹತ್ತುಹತ್ತು ನಿಮಿಷಕ್ಕೂ "ಇದ್ದೀಯಾ, ನನ್ನ ಚಿನ್ನಾ?" ಎಂದು ಕೂಗುತ್ತ ಮನೆಗೆ ಬಂದುಬಿಡುತ್ತಿದ್ದ. ಅದರಿಂದಾಗಿ ಅವನಿಗೆ ದಿನದಲ್ಲಿ ಸಾಕಷ್ಟು ಕೆಲಸಮಾಡಲು ಸಾಧ್ಯವಾಗುತ್ತಿರಲಿಲ್ಲ.

"ಹೀಗಾದರೆ ನಡೆಯೋಲ್ಲ!" ಎಂದು ಅವನ ಹೆಂಡತಿ ಪಟ್ಟಣಕ್ಕೆ ಹೋಗಿ ಒಬ್ಬ ಚಿತ್ರಕಾರನಿಂದ ತನ್ನ ಚಿತ್ರವೊಂದನ್ನು ಬರಸಿ ತಂದಳು. ಅದನ್ನು ಗೋಂಬೆಯಿಗೆ ಕೊಟ್ಟು ಹೇಳಿದಳು, "ಇದೋ, ನನ್ನ ಚಿತ್ರ. ಇದನ್ನು ಹತ್ತಿರದ ಉಪ್ಪುನೇರಳೆ ಗಿಡಕ್ಕೆ ತೂಗಿಹಾಕು. ಕೆಲಸಮಾಡುವಾಗ ಅದನ್ನ ನೋಡುತ್ತಾ ಇದ್ದರೆ, ನಾನಿಲ್ಲ ಅನ್ನೋ ಭಾವನೆ ಅಷ್ಟಾಗಿ ಇರೋಲ್ಲ." ಗೋಂಬೆಯಿ ಅವಳು ಹೇಳಿದಂತೆಯೇ ಮಾಡಿದ. ಹತ್ತು ಹತ್ತು ನಿಮಿಷಕ್ಕೂ ಕೆಲಸ ನಿಲ್ಲಿಸಿ ಹೆಂಡತಿಯ ಚಿತ್ರ ನೋಡುತ್ತಿದ್ದ. ಅವಳನ್ನು ನೋಡಲು ಮನೆಗೆ ಓಡುವುದು ತಪ್ಪಿತು. ಒಂದು ದಿನ ಇದ್ದಕ್ಕಿದ್ದಂತೆ ಜೋರಾಗಿ ಗಾಳಿ ಬೀಸಿತು. ಗಾಳಿಯಲ್ಲಿ ಚಿತ್ರ ಹಾರಿ ಹೋಯಿತು. ಗೋಂಬೆಯಿ ಅದನ್ನು ಹಿಡಿದುಕೊಳ್ಳಲು ಪ್ರಯತ್ನಿಸಿದ. ಆದರೆ ಅದು ಕಣ್ಮರೆಯಾಗಿ ಹೋಗಿತ್ತು. ಗೋಂಬೆಯಿ ಅಳುತ್ತ ಹೆಂಡತಿಗೆ ವಿಷಯ ತಿಳಿಸಲು ಮನೆಗೆ ಓಡಿಬಂದ. ಅವಳು "ಹೋಗಲಿ ಬಿಡು, ನನ್ನ ರಾಜ. ಪಟ್ಟಣಕ್ಕೆ ಹೋಗಿ ಇನ್ನೊಂದು ಚಿತ್ರ ಬರಸಿಕೊಂಡು ಬರ್ತೀನಿ" ಎಂದು ಸಮಾಧಾನ ಹೇಳಿದಳು.

ಈ ನಡುವೆ ಚಿತ್ರ ಗಾಳಿಯಲ್ಲಿ ಹಾರುತ್ತ ಹೋಗಿ, ಕೊನೆಗೆ ಒಂದು ಕೋಟೆಮನೆಯ ತೋಟದಲ್ಲಿ ಕೆಳಗಿಳಿದು ಬಿದ್ದಿತು. ಆ ಕೋಟೆಮನೆಯ ದೊರೆ ಅದನ್ನು ನೋಡಿದ ತಕ್ಷಣ, ಅವನಿಗೆ ಆ ಚಿತ್ರದ ಹೆಂಗಸಿನಲ್ಲಿ ಪ್ರೀತಿಯುಂಟಾಯಿತು. "ಚಿತ್ರವಿದ್ದ ಮೇಲೆ ಅಂತಹ ವ್ಯಕ್ತಿಯೂ ಇರಲೇಬೇಕು" ಎಂದು ಯೋಚಿಸಿ, ಅವನು ಅವಳನ್ನು ತಡಮಾಡದೆ ಹುಡುಕಿ ತರಲು ಆಳುಗಳನ್ನು ಅಟ್ಟಿದ.

ಆಳುಗಳು ಆ ಹೆಂಗಸು ಯಾರಿಗಾದರೂ ಗೊತ್ತೇ ಎಂದು ವಿಚಾರಿಸುತ್ತ ಚಿತ್ರ ಹಿಡಿದು ಹಳ್ಳಿಯಿಂದ ಹಳ್ಳಿಗೆ ತಿರುಗುತ್ತ, ಕೊನೆಗೆ ಗೋಂಬೆಯಿದ್ದ ಹಳ್ಳಿಗೆ ಬಂದರು. ಆ ಹಳ್ಳಿಯ ಜನರಿಗೆ ಚಿತ್ರ ತೋರಿಸಿ "ಈ ಹೆಂಗಸನ್ನು ಬಲ್ಲಿರಾ?" ಎಂದು ಕೇಳಿದರು.

ಹಳ್ಳಿಯ ಜನ ಚಿತ್ರ ನೋಡಿದ ತಕ್ಷಣ "ಹೌದು, ಅದು ಗೋಂಬೆಯ ಹೆಂಡತಿ" ಅಂದರು.

ಆಳುಗಳು ಗೋಂಬೆಯ ಗುಡಿಸಲಿಗೆ ಹೋದಾಗ ಯಾವ ಅನುಮಾನವೂ ಇಲ್ಲದೆ ತದ್ವತ್ ಚಿತ್ರದಂತೆಯೇ ಕಾಣುತ್ತಿದ್ದ ಗೋಂಬೆಯ ಹೆಂಡತಿಯನ್ನು ಕಂಡರು.

"ಇವಳನ್ನು ನಮ್ಮ ದೊರೆಗಳ ಹತ್ತಿರ ಕರಕೊಂಡು ಹೋಗ್ತೀವಿ" ಎನ್ನುತ್ತ ಅವಳನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸಿದರು.

"ಬೇಡಿ, ನಿಮ್ಮ ದಮ್ಮಯ್ಯ. ಅವಳನ್ನು ತೊಗೊಂಡುಹೋಗಬೇಡಿ." ಎಂದು ಗೋಂಬೆಯಿ ಗೋಗರೆದ. ಆದರೆ ಅವನ ಯಾಚನೆಯೆಲ್ಲವೂ ವ್ಯರ್ಥವಾಯಿತು. ಅವನು ಸುರಿಸಿದ ಕಣ್ಣೀರಿನಿಂದ ಒಂದಡಿಯಷ್ಟು ಅಗಲದ ಮಡುವಾಯಿತು.

"ಬೇಡ, ಅಳಬೇಡ, ಗೋಂಬೆಯಿ." ಹೆಂಡತಿ ಹೇಳಿದಳು. "ಈಗ ನಾವೇನೂ ಮಾಡುವ ಹಾಗಿಲ್ಲ. ಇಲ್ಲಿ ಕಿವಿಗೊಟ್ಟು ಕೇಳು. ಹೊಸ ವರ್ಷದ ಹಿಂದಿನ ಸಂಜೆ ಕೋಟೆಮನೆಯ ಬಳಿ ಬಾ. ಹೊಸವರ್ಷದ ಹೆಬ್ಬಾಗಿಲ ಅಲಂಕಾರಕ್ಕೆ ಪೀತದಾರು ಮರದ ಕೊಂಬೆಗಳನ್ನು ತಾ. ಆಗ ನಾವು ಒಬ್ಬರನ್ನೊಬ್ಬರು ನೋಡಬಹುದು. ಎಲ್ಲ ಸರಿಹೋಗುತ್ತೆ." ಅವಳು ಮಾತು ಮುಂದುವರಿಸುವಷ್ಟರಲ್ಲಿ ಆಳುಗಳು ಅವಳನ್ನು ಕೋಟೆಮನೆಗೆ ಕೊಂಡೊಯ್ದರು.

ಗೋಂಬೆಯಿ ಪ್ರತಿದಿನವೂ ಹೆಂಡತಿಯನ್ನು ನೋಡಬರುವ ದಿನ ಬಂದೀತೇ ಎಂದು ಕಾಯುತ್ತಿದ್ದ. ಕೊನೆಗೊಂದು ದಿನ ನೆರೆಹೊರೆಯವರು ಆವೊತ್ತು ಹೊಸ ವರ್ಷದ ಹಿಂದಿನ ದಿನವೆಂದು ಹೇಳಿದರು. ಗೋಂಬೆಯಿ ಹೆಗಲ ಮೇಲೆ ಪೀತದಾರು ಮರದ ಕೊಂಬೆಗಳ ಒಂದು ದೊಡ್ಡ ಕಟ್ಟನ್ನು ಹೊತ್ತುಕೊಂಡು, ಕೋಟೆಮನೆಗೆ ಹೊರಟ. ಇನ್ನೇನು ತನ್ನ ಪ್ರೀತಿಯ ಹೆಂಡತಿಯನ್ನು ನೋಡುತ್ತೇನೆ ಎಂಬ ಸಡಗರ ಅವನಿಗೆ.

ಕೋಟೆಮನೆಯ ಹೆಬ್ಬಾಗಿಲ ಬಳಿ ಬಂದು "ಪೀತದಾರು ಕೊಳ್ಳಿ, ಪೀತದಾರು. ಹೊಸ ವರ್ಷದ ಅಲಂಕಾರಕ್ಕೆ ಪೀತದಾರು" ಎಂದು ಕೂಗಿದ.

ಕೋಟೆಯೊಳಗಿದ್ದ ಅವನ ಹೆಂಡತಿಗೆ ಅದು ಕೇಳಿಸಿತು. ಅವಳ ಮುಖದ ಮೇಲೆ ನಸುನಗೆ ಮೂಡಿತು. ಕೋಟೆಮನೆಗೆ ಅವಳನ್ನು ಕರೆತಂದಾಗಿನಿಂದ ಅವಳು ನಕ್ಕದ್ದೆಂದರೆ ಅದೇ ಮೊದಲು. ದೊರೆಗೆ ಅವಳ

ಗೆಲುಮೊಗವನ್ನು ಕಂಡು ಸಂತೋಷವಾಯಿತು. "ಪೀತದಾರು ಮಾರುವವನನ್ನು ಒಳಗೆ ಕರೆಯಿರಿ" ಎಂದು ಆಳುಗಳಿಗೆ ಅಪ್ಪಣೆ ಮಾಡಿದ.

ಗೋಂಬೆಯಿ ಎದುರಿಗೆ ಬಂದು ನಿಂತಾಗ ಅವನ ಹೆಂಡತಿ ಇನ್ನೂ ಹೆಚ್ಚು ಗೆಲುವಾಗಿ ಕಂಡಳು. ಅವಳು ಅವನನ್ನು ಕಂಡು ಸಂತೋಷದಿಂದ ನಕ್ಕುದನ್ನು ನೋಡಿ ದೊರೆ ಯೋಚಿಸಿದ. "ಒಬ್ಬ ಪೀತದಾರು ಹೊತ್ತು ಮಾರುವವನನ್ನು ಕಂಡು ಅವಳಿಗೆ ಅಷ್ಟು ಸಂತೋಷವಾಗುವುದಿದ್ದರೆ ನಾನೂ ಯಾಕೆ ಪೀತದಾರು ಹೊತ್ತು ಮಾರಬಾರದು?"

ದೊರೆ ಗೋಂಬೆಯಿಗೆ ತನ್ನೊಡನೆ ಬಟ್ಟೆ ಬದಲಾಯಿಸಿಕೊಳ್ಳಲು ಹೇಳಿದ. ಗೋಂಬೆಯಿಯ ಚಿಂದಿ ಬಟ್ಟೆಯನ್ನು ತಾನು ತೊಟ್ಟು. ತೋಟದಲ್ಲಿ ಆ ಕಡೆಯಿಂದ ಈ ಕಡೆಗೆ ಓಡಾಡುತ್ತ "ಪೀತದಾರು ಕೊಳ್ಳಿ, ಪೀತದಾರು" ಎಂದು ಕೂಗಿದ.

ಗೋಂಬೆಯಿಯ ಹೆಂಡತಿಗೆ ಇದ್ದಿದ್ದೂ ಹೆಚ್ಚು ಸಂತೋಷವಾಯಿತು. ಅವಳು ತನ್ನ ಪುಟ್ಟ ಕೈಗಳಿಂದ ಚಪ್ಪಾಳೆ ತಟ್ಟುತ್ತ ಗೊಳ್ಳನೆ ನಗತೊಡಗಿದಳು. ಅವಳು ನಗುವುದನ್ನು ನೋಡಿ ದೊರೆಗೂ ಸಂತೋಷ ಹೆಚ್ಚಿತು. ಅವನು ಬೆನ್ನಿನ ಮೇಲೆ ಪೀತದಾರು ಕೊಂಬೆಗಳನ್ನು ಹೊತ್ತು ತೋಟದಲ್ಲೆಲ್ಲಾ ಕುಣಿದಾಡಿದ. "ಪೀತದಾರು. ಒಳ್ಳೆಯ ಪೀತದಾರು" ಎಂದು ಮತ್ತೆಮತ್ತೆ ಕೂಗಿದ. ಹೀಗೆ ಕೂಗುತ್ತ. ಕುಣಿದಾಡುತ್ತ, ತನಗೆ ಅರಿವಿಲ್ಲದೆಯೇ ಹೆಬ್ಬಾಗಿಲು ದಾಟಿ ಹೊರಗೆ ಬಂದ.

ಅವನು ಹೊರಹೋದ ತಕ್ಷಣ ಗೋಂಬೆಯಿಯ ಹೆಂಡತಿ ಆಳುಗಳಿಗೆ ಹೆಬ್ಬಾಗಿಲ ಚಿಲಕ ಹಾಕುವಂತೆ ಹೇಳಿದಳು. ಕೊಂಚ ಹೊತ್ತಾದ ಮೇಲೆ ದೊರೆಗೆ ತಾನು ತೋಟ ಬಿಟ್ಟು ಹೊರಗೆ ಬಂದಿರುವುದರ ಅರಿವಾಯಿತು. ಹೆಬ್ಬಾಗಿಲ ಬಳಿ ಹೋಗಿ ನೋಡುವಾಗ. ಅದು ಮುಚ್ಚಿರುವುದನ್ನು ಕಂಡು ಆಶ್ಚರ್ಯವಾಯಿತು. "ಬಾಗಿಲು. ಬಾಗಿಲು ತೆಗೆಯಿರಿ," ಎಂದು ಕೂಗಿಕೊಂಡ. ಅವನಿಗೆ ಯಾರೂ ಗಮನ ಕೊಡಲಿಲ್ಲ.

ಕೋಟೆಮನೆಯಲ್ಲಿ ಗೋಂಬೆಯಿ ಮತ್ತು ಅವನ ಚತುರೆ ಹೆಂಡತಿಗೆ ಬೇಕಾದುದೆಲ್ಲ ಇತ್ತು. ಅವರು ಆಮೇಲೆ ಕೊನೆಯವರೆಗೂ ಸುಖದಿಂದಿದ್ದರು.

ಹೇಳಿದವರು: **ಕೆಯ್‌ಗೊ ಸೆಕಿ**

ಚಿತ್ರಗಳು: **ತೋಷಿಯೊ ಕಾಜಿಯಾಮ**

ಖಮೇರ್

# ನಾಲ್ಕು ಜನ ಬೋಳರು

ಹಿಂದಿನ ಕಾಲದಲ್ಲಿ ಒಬ್ಬ ಮನುಷ್ಯನಿದ್ದ. ಅವನು ತೆಂಗಿನ ಗರಿಗಳಿಂದ ಬುಟ್ಟಿ ಹೆಣೆದು ಜೀವಿಸುತ್ತಿದ್ದ. ಒಂದು ದಿನ ಅವನು ಎತ್ತರವಾದ ಮರವೊಂದನ್ನು ಏರಿ, ಗರಿ ಕಡಿದು, ಅಲ್ಲೇ ಬುಟ್ಟಿ ಹೆಣೆಯಲು ಕುಳಿತ.

ಅಲ್ಲಿ ಮೇಲೆ ಕುಳಿತು ಸಂತೋಷದಿಂದ ಸೀಟಿ ಹೊಡೆಯುತ್ತ ಬುಟ್ಟಿ ಹೆಣೆಯುತ್ತಿದ್ದಾಗ ಅವನಿಗೆ 'ಕೆಲಸಕ್ಕೆ ಒಬ್ಬ ಆಳಿದ್ದರೆ ವಾಸಿ' ಅನ್ನಿಸಿತು. "ಈ ಬುಟ್ಟೀನ ಹೆಣೆದು ಮುಗಿಸಿ ಹೆಚ್ಚು ಬೆಲೇಗೆ ಮಾರ್ತೀನಿ. ಆಳಿಟ್ಟುಕೊಳ್ಳಲು ಬೇಕಾದಷ್ಟು ಹಣ ಉಳಿಯುವವರೆಗೂ ಹೆಚ್ಚುಹೆಚ್ಚು ಬುಟ್ಟಿ ಹೆಣೇತೀನಿ" ಎಂದು ಅವನು ಯೋಚಿಸತೊಡಗಿದ.

ಆಳಿಟ್ಟುಕೊಳ್ಳುವೆನೆಂದು ಯೋಚಿಸುತ್ತ ಆ ಸಂತೋಷದಲ್ಲಿ ಅವನು ಮೈಮರೆತ. "ಆಳು ಸರಿಯಾಗಿ ಕೆಲಸ ಮಾಡದಿದ್ದರೆ ಅವನನ್ನು ಹೀಗೆ ಒದೀತೀನಿ, ಹೀಗೆ" ಎನ್ನುತ್ತ, ಎಲ್ಲಿ ಕೂತಿರುವೆನೆಂಬ ಅರಿವೂ ಇಲ್ಲದೆ ಕಾಲೆತ್ತಿ ಗಾಳಿಯಲ್ಲಿ ಬೀಸಿದಾಗ, ಆಯತಪ್ಪಿ ಮರದ ಮೇಲಿಂದ ಬಿದ್ದ.

ಆದರೆ ಅವನ ಅದೃಷ್ಟ. ಕೆಳಗೆ ಬೀಳುವಾಗ ಮರದ ಗರಿಗಳಿಗೆ ಜೋತುಬಿದ್ದು ಅಲ್ಲಿಯೇ ತೂಗಾಡುತ್ತ "ಬದುಕಿಸಿ, ಬದುಕಿಸಿ" ಎಂದು ಕೂಗಿಕೊಂಡ.



ಅದೇ ಹೊತ್ತಿಗೆ ಒಬ್ಬ ಮಾವುತ ಆನೆ ಹತ್ತಿ ಬರುತ್ತಿದ್ದ. ಅವನು ಮೇಲೆ ಅಂತರಿಕ್ಷದಿಂದ ಬಂದ ಕೂಗನ್ನು ಕೇಳಿ ತಲೆಯೆತ್ತಿ ನೋಡಿದ. ಬುಟ್ಟಿ ಹೆಣೆಯುವ ಮೋದರವನು ಮರದ ಮೇಲೆ ಜೋಲಾಡುತ್ತಿದ್ದುದು ಕಾಣಿಸಿತು.

ಮೋದ "ನನ್ನನ್ನು ಕೆಳಗಿಳಿಸು. ಸಾಯುವವರೆಗೂ ನಿನ್ನ ಆಳಾಗಿರ್ತೀನಿ" ಎಂದು ಕೂಗಿಕೊಂಡ.

ತಕ್ಷಣ ಮಾವುತ ಆ ಮರದ ಕಡೆಗೆ ಆನೆ ಓಡಿಸಿ ತಂದು, ಅದರ ಬೆನ್ನಿನ ಮೇಲೆ ನಿಂತು, ಕೈಯೆತ್ತಿ ಮೋದನ ಕಾಲು ಹಿಡಿದುಕೊಂಡ.

ಅದೇ ಹೊತ್ತಿಗೆ, ಆನೆ ಮಾವುತನ ಕಾಲು ತನ್ನ ಬೆನ್ನಿಗೆ ಒತ್ತುತ್ತಿದ್ದುದನ್ನು ಕಂಡು ಅದು ಮುಂದಕ್ಕೆ ಹೋಗಲು ಸನ್ನೆಯೆಂದುಕೊಂಡು ಹೊರಟೇಬಿಟ್ಟಿತು. ಮೋದ ಮರಕ್ಕೆ ಜೋತುಬಿದ್ದಿದ್ದರೆ, ಮಾವುತ ಅವನ ಕಾಲು ಹಿಡಿದುಕೊಂಡು ಜೋಲಾಡುತ್ತಿದ್ದ.

ಈಗ ಮೋದ ಮಾವುತ ಇಬ್ಬರೂ ಒಟ್ಟಾಗಿ "ಬದುಕಿಸಿ, ಬದುಕಿಸಿ" ಎಂದು ಕೂಗತೊಡಗಿದರು. ಅದೇ ಹೊತ್ತಿಗೆ ನಾಲ್ಕು ಜನ ಬೋಳುತಲೆಯವರು ಕೆಳಗೆ ಹೋಗುತ್ತಿದ್ದರು. ಅವರು ಕೂಗು ಕೇಳಿ ಆಶ್ಚರ್ಯಪಟ್ಟು ನಿಂತುಕೊಂಡರು.

"ಬದುಕಿಸಿ, ಬದುಕಿಸಿ. ಸಾಯುವವರೆಗೂ ನಿಮ್ಮ ಆಳಾಗಿ ಸೇವೆ ಮಾಡ್ತೀವಿ" ಎಂದು ಮೋದ ಮಾವುತರಿಬ್ಬರೂ ಅರಚಿದರು.





ನಾಲ್ವರು ಜೋಳರಿಗೂ ಹೀಗೆ ಇಬ್ಬರು ಆಳುಗಳು ಬಿಟ್ಟಿ ಸಿಗುವರಲ್ಲ ಎಂದು ಸಂತೋಷವಾಯಿತು. "ತಾಳಿ, ತಾಳಿ" ಎಂದು ಅರಚುತ್ತ ಅವರು ಹೋಗಿ ಒಂದು ಬಲೆ ತಂದರು. ಬಲೆಯ ಒಂದೊಂದು ಮೂಲೆಯನ್ನೂ ಒಬ್ಬೊಬ್ಬ ಜೋಳ ತನ್ನ ಕುತ್ತಿಗೆಗೆ ಕಟ್ಟಿಕೊಂಡು, ಮರದ ಕೆಳಗೆ ಬಲೆ ಒಡ್ಡಿದರು. "ನೀವು ಕೆಳಕ್ಕೆ ಧುಮುಕಿ. ನಾವು ಹಿಡಿದುಕೊಳ್ಳೀವಿ," ಅಂದರು.

ಮೇದ ಗರಿಯು ಕೈಬಿಟ್ಟ. ಅವನೂ ಮಾವುತನೂ ಬಲೆಯೊಳಗೆ ಬಿದ್ದರು. ಅವರು ಬಿದ್ದ ಜೋರಿಗೆ ನಾಲ್ವರು ಬೋಳರೂ ಒಮ್ಮೆಲೇ ಥಟ್ಟನೆ ಜಗ್ಗಿದರು. ಅವರ ಬೋಳುತಲೆಗಳು ಒಂದಕ್ಕೊಂದು ಬಡಿದು ಹೋಳಾಗಿ ಅವರು ಅಲ್ಲೇ ಸತ್ತುಬಿದ್ದರು.

ಮೇದ ಮಾವುತರಿಬ್ಬರಿಗೂ ಸ್ವಲ್ಪವೂ ಪೆಟ್ಟಾಗದೆ ಅವರು ಸಂತೋಷದಿಂದ ಪರಟುತ್ತ ಹೊರಟು ಹೋದರು.

ಹೇಳಿದವರು: **ಕೆನ್ ಕುನ್**

ಚಿತ್ರಗಳು: **ಹುವೋತ್ ಥುನ್**

## ಮಲೇಷಿಯಾ

# ಸೂತೊನ್ ದೊರೆಯ ಸಾಹಸಗಳು

ಹಿಂದೆ, ಬಹಳ ಹಿಂದೆ, ಮುಂಬಾಂಗ್ ನೆಗಾರ ಎಂಬ ಒಂದು ಶಾಂತ ಸಮೃದ್ಧ ದೇಶವಿತ್ತು. ಆ ದೇಶದ ರಾಜ ಸೂತೊನ್ ದಕ್ಷ, ನ್ಯಾಯಪರ. ಅವನ ಹೆಂಡತಿ ರಾಣಿ ಪುತೇರಿ ಇಕದೋನ್ ಚೆಲುವೆ.

ಒಂದು ದಿನ ರಾಣಿಗೆ ಜಿಂಕೆಯ ಮಾಂಸ ತಿನ್ನುವ ಬಯಕೆಯಾಯಿತು. ದೊರೆ ತೋಕ್ ಪವಾಂಗ್ ಎಂಬ ಬೇಡರವನಿಗೆ ಕಾಡಿನಿಂದ ಜಿಂಕೆ ಹುಡುಕಿ ತರುವಂತೆ ಅಪ್ಪಣೆ ಮಾಡಿದ. ಬೇಡ ಕಾಡಿನಲ್ಲಿ ಒಂದು ಕೊಳದ ಬದಿ ಪೊದೆಗಳ ನಡುವೆ ಜಿಂಕೆಗೆ ಮರಸು ಕಾಯುತ್ತ ಕೂತಿದ್ದಾಗ ಸ್ವರ್ಗದ ಕಯಾಂಗನ್ ರಾಜ್ಯದಿಂದ ಏಳು ಮಂದಿ ಸುಂದರ ರಾಜಕುಮಾರಿಯರು ಕೆಳಗಿಳಿದು ಬಂದು ಕೊಳದಲ್ಲಿ ಸ್ನಾನಮಾಡುತ್ತಿರುವುದು ಕಾಣಿಸಿತು. ಅವರಲ್ಲಿ ಪ್ರತಿಯೊಬ್ಬರು ತಮ್ಮ ರೆಕ್ಕೆಗಳನ್ನು ಕೊಳದ ದಂಡೆಯ ಮೇಲೆ ಇರಿಸಿದ್ದರು.

ಎಲ್ಲರಿಗಿಂತ ಕಿರಿಯವಳಾದ ಚೆಂಪಕಬೀರು ತುಂಬ ಚೆಲುವೆಯಾಗಿದ್ದಳು. ಬೇಡ ಅವಳನ್ನು ಹಿಡಿದು ರಾಜನಿಗೆ ಕಾಣಿಕೆ ಅರ್ಪಿಸುವುದಾಗಿ ನಿಶ್ಚಯಿಸಿದ. ಅವನು ಅವಳ ರೆಕ್ಕೆಪುಕ್ಕಗಳನ್ನು ಬಚ್ಚಿಟ್ಟ. ಅಕ್ಕಂದಿರು ಸ್ನಾನ ಮುಗಿಸಿ ಹಾರಿಹೋದರು. ಚೆಂಪಕಳಿಗೆ ಅವರನ್ನು ಹಿಂಬಾಲಿಸುವುದಾಗಲಿಲ್ಲ. ಅವಳು ಬೇಡನಿಗೆ ರೆಕ್ಕೆಯನ್ನು ಹಿಂದಕ್ಕೆ ಕೊಡುವಂತೆ ಗೋಗರೆದಳು. ಅವನು ಕೊಡಲಿಲ್ಲ. ತಾನು ಹೇಳಿದ ಹಾಗೆ ಕೇಳುವೆನೆಂದು ಅವಳಿಂದ ಮಾತು ಪಡೆದು, ಬೇಡ ಅವಳನ್ನು ರಾಜನ ಬಳಿ ಕರೆದುಕೊಂಡು ಹೋದ. ರಾಜ ಪದ್ಧತಿಯಂತೆ ಅವಳನ್ನು ಮದುವೆಯಾಗಿ ತನ್ನ ಎರಡನೆಯ ಹೆಂಡತಿಯನ್ನಾಗಿ ಮಾಡಿಕೊಂಡ. ಬೇಡ ಅವಳ ರೆಕ್ಕೆಗಳನ್ನು ರಾಜನಿಗೆ ಕೊಟ್ಟ, ರಾಜ ಅವನ್ನು ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿಟ್ಟ.

ಕೆಲವು ದಿನ ಕಳೆದ ಮೇಲೆ ರಾಣಿ ಪುತೇರಿಗೆ ಚೆಂಪಕಬೀರುವನ್ನು ಕಂಡು ಅಸೂಯೆ ಹುಟ್ಟಿತು. ರಾಜ ತನಗಿಂತ ಹೆಚ್ಚಾಗಿ ಅವಳಿಗೆ ಗಮನಕೊಡುತ್ತಿದ್ದುದೇ ಅದಕ್ಕೆ ಕಾರಣ. ಪುತೇರಿ ತನ್ನ ತಂದೆತಾಯಿಯರಿಗೆ ದೂರು ಹೇಳಿದಳು. ಅವಳ ತಂದೆ ಮಗಳಿಗೆ ಉಂಟಾದ ತಾತ್ಸಾರಕ್ಕೆ ರೇಗಿ, ರಾಜನಿಗೆ ಒಂದು ಸುಳ್ಳು ಸ್ವಪ್ನ ಬೀಳುವಂತೆ ಮಾಡಿದ. ರಾಜನನ್ನು ಅರಮನೆ ಬಿಟ್ಟು ದೂರ ಕಳಿಸುವುದು ಸಾಧ್ಯವಾದರೆ ಅವನಿಲ್ಲದಾಗ ತಾನೂ ತನ್ನ ಮಗಳೂ ಸೇರಿ ಚೆಂಪಕಳನ್ನು ಅಟ್ಟಿಬಿಡಬಹುದೆಂದು ಅವನ ಹಂಚಿಕೆ.

ಸರಿ, ಒಂದು ರಾತ್ರಿ ರಾಜನಿಗೆ ಕನಸು ಬಿದ್ದಿತು. ಕಪ್ಪು ಕೊಂಬಿನ ಬಿಳಿಯ ಆನೆಯೊಂದನ್ನು ಚೆಂಪಕಳಿಗೆ ಉಡುಗೊರೆಯಾಗಿ ಕೊಡಬೇಕೆಂಬುದೇ ಆ ಕನಸು. ರಾಜ ಮಾರನೆಯ ಬೆಳಿಗ್ಗೆ ಕನಸಿನ ಆನೆಯನ್ನು ಹುಡುಕಿಕೊಂಡು ಹೊರಟ. ರಾಜ ಅರಮನೆ ಬಿಟ್ಟು ಹೋದ ಕೂಡಲೇ ರಾಣಿ ಪುತೇರಿ ಚೆಂಪಕಬೀರುವಿಗೆ ಕುಣಿಯಲು ಹೇಳಿದಳು. "ರೆಕ್ಕೆಯಿದ್ದರೆ ಚೆನ್ನಾಗಿ ಕುಣಿದು ತೋರಿಸಬಲ್ಲೆ" ಅಂದಳು ಚೆಂಪಕಬೀರು. ರಾಣಿ ಪೆಟ್ಟಿಗೆ ತೆಗೆದು ರೆಕ್ಕೆ ತಂದುಕೊಟ್ಟಳು. ಚೆಂಪಕಬೀರು ಅದನ್ನು ತೊಟ್ಟು, ಕುಣಿಯುತ್ತ ಕುಣಿಯುತ್ತ ಹಾರಿಹೋದಳು. ತನ್ನ ಜೀವ ಅಪಾಯಕ್ಕೆ ಸಿಕ್ಕಿದೆಯೆಂದು ಅವಳಿಗೆ ಗೊತ್ತಿತ್ತು. ನೇರವಾಗಿ ಕಯಾಂಗನ್

ನಲ್ಲಿನ ತನ್ನ ಮನೆಗೆ ಹಿಂದಿರುಗುವ ಬದಲು, ದಾರಿಯಲ್ಲಿ ರಾಜ ಬರುವುದನ್ನೇ ಕಾಯುತ್ತ ಅವಿತು ನಿಂತು ಕೊಂಡಳು.

ರಾಜ ಆನೆ ಹುಡುಕಿಕೊಂಡು ಅದೇ ದಾರಿ ಹೋಗುವ ಹೊತ್ತಿಗೆ ತನಗೆ ಮೋಸವಾಗಿದೆಯೆಂದು ಅವನಿಗೆ ಅರಿವಾಯಿತು. ತಾನಿಲ್ಲದಾಗ ಬೀರುವಿನ ಗತಿ ಏನಾಗಿದೆಯೋ ಎಂಬ ಕಾತರದಿಂದ ಅವನು ಹಿಂದಿರುಗತೊಡಗಿದ. ಅವನ ಆಶ್ಚರ್ಯಕ್ಕೆ ಚೆಂಪಕಬೀರು ಎದುರಿಗೇ ಕಾಣಿಸಿಕೊಂಡು, ತನ್ನನ್ನು ಕೊಲ್ಲಲು ನಡೆದಿದ್ದ ಸಂಚನ್ನು ವಿವರಿಸಿದಳು. "ನನಗೆ ಮತ್ತೆ ಅರಮನೆಗೆ ಬರುವ ಧೈರ್ಯವಿಲ್ಲ. ಈ ಮಂತ್ರದ ಉಂಗುರ ಇಟ್ಟುಕೊ. ನೀನೆಂದಾದರೂ ನನ್ನನ್ನು ಹಿಂಬಾಲಿಸಿ ಕಯಾಂಗನ್‌ಗೆ ಬರಲು ನಿಶ್ಚಯಿಸಿದರೆ ಇದು ನಿನಗೆ ಅಗತ್ಯ ಬೀಳುತ್ತದೆ. ದಾರಿಯಲ್ಲಿ ಒಂದು ಸೀಳುಬಂಡೆಯಿದೆ, ರೋಕ್ ಎಂಬ ಭಯಂಕರವಾದ ಹಕ್ಕಿಯಿದೆ. ಅದಕ್ಕೆ ಈ ಉಂಗುರ ತೋರಿಸಿ, ನನ್ನ ಹೆಸರು ಹೇಳು. ಅವು ನಿನ್ನನ್ನು ಹೋಗಗೊಡುತ್ತವೆ," ಎಂದು ಹೇಳಿದಳು. ಚೆಂಪಕಬೀರು ಅಳುತ್ತ ರಾಜನಿಗೆ ವಿದಾಯ ಹೇಳಿದಳು. ರಾಜ ದುಃಖದಿಂದ ಅರಮನೆಗೆ ಹಿಂದಿರುಗಿದ. ಅಲ್ಲಿ ರಾಣಿ ಚೆಂಪಕಬೀರುವನ್ನು ಕೊಲ್ಲಲು ನಿಜವಾಗಿ ಹಂಚಿಕೆ ಹಾಕಿದ್ದಳೆಂದು ತಿಳಿದು ಭಯವಾಯಿತು. ಒಂದು ಕ್ಷಣ ಸಹ ತಡಮಾಡದೆ ಚೆಂಪಕಬೀರುವನ್ನು ಹಿಂಬಾಲಿಸಿ ಕಯಾಂಗನ್‌ಗೆ ಹೊರಟ.

ಅವನಿನ್ನೂ ಸೀಳುಬಂಡೆಯಿಂದ ಹಲವಾರು ಮೈಲಿ ದೂರವಿರುವಾಗಲೇ ಅದರ ಸಿಡಿಲುದನಿ ಕೇಳಿ ಬರುತ್ತಿತ್ತು. ಅದೊಂದು ಭಯಾನಕ ದೃಶ್ಯ. ಅದು ಕ್ಷಣಕ್ಷಣಕ್ಕೂ ಘೋರ ಅಬ್ಬರದಿಂದ ಬಾಯಿ ತೆರೆದು ಮುಚ್ಚಿಕೊಳ್ಳುತ್ತಿತ್ತು. ಬಂಡೆಯ ಎರಡು ಹೋಳುಗಳ ನಡುವೆ ನೊಣ ನುಸುಳುವಷ್ಟೂ ಸ್ಥಳವಿರಲಿಲ್ಲ. ರಾಜ ಚೆಂಪಕಬೀರುವಿನ ಉಂಗುರ ತೋರಿಸಿ ಅವಳ ಹೆಸರು ಹೇಳಿದ. ತಕ್ಷಣ ಬಂಡೆ ಸ್ತಬ್ಧವಾಯಿತು. ಹಾಗೆ ಅದು ನಿಶ್ಶಬ್ಧ ತಾಳಿದಾಗ ರಾಜ ಬಂಡೆಯ ಹೋಳುಗಳ ನಡುವ ಸುರಕ್ಷಿತವಾಗಿ ಹಾದು ಹೋದ.

ಮುಂದೆ ರಾಜನಿಗೆ ರೋಕ್ ಹಕ್ಕಿ ಎದುರಾಯಿತು. ಭೂತಾಕಾರದ ಹಕ್ಕಿ, ಚೂಪಾದ ಡೊಂಕು ಕೊಕ್ಕುಗಳು, ಮಿಂಚುವ ಕಣ್ಣುಗಳು. "ಲೋ ಹುಲು ಮನುಜ, ಇಲ್ಲಿ ಬರಲು ನಿನಗೆ ಅದೆಷ್ಟೋ ಧೈರ್ಯ. ಇರಲಿ, ಇವತ್ತು ನೀನೇ ನನ್ನ ಊಟ !" ಎಂದು ಅದು ಆರ್ಭಟಿಸಿತು. ರಾಜ ಚೆಂಪಕಳ ಉಂಗುರ ತೋರಿಸಿ ಅವಳ ಹೆಸರು ಹೇಳಿದ. ಹಕ್ಕಿ ಅವನಿಗೆ ಜೀವಹಾನಿ ಮಾಡದೆ ಕಯಾಂಗನ್‌ಗೆ ಕರೆದೊಯ್ಯಲು ಒಪ್ಪಿತು.

ಕಯಾಂಗನ್ ತಲಪಿದಾಗ ರಾಜ ಒಬ್ಬ ಮುದುಕನ ವೇಷ ತೊಟ್ಟು, ಅವಾಂಗ್ ಹಿತಾವಮ್ ಎಂದು ಹೆಸರಿಟ್ಟುಕೊಂಡ. ಚೆಂಪಕಳ ಮುಖ ಕಾಣುವವರೆಗೂ ಕಯಾಂಗ್‌ನ ದೊರೆಗೆ ತಾನು ಯಾರೆಂದು ತಿಳಿಸಲು ಇಷ್ಟಪಡಲಿಲ್ಲ.

ಚೆಂಪಕಳು ಕಣ್ಣಿಗೆ ಬೀಳುವಳೇನೊ ಎಂಬ ಆಸೆಯಿಂದ ಒಂದು ದಿನ ರಾಜ ಸೂತೊನ್ ಅರಮನೆಯ ಹೆಬ್ಬಾಗಿಲ ಮುಂದೆ ಓಡಾಡುತ್ತಿದ್ದಾಗ ಹೆಣ್ಣಾಳುಗಳು ಚೆಂಪಕಳ ಸ್ನಾನಕ್ಕೆ ನೀರು ಒದಗಿಸಲೆಂದು ತಲೆಯ ಮೇಲೆ ನೀರಿನ ಕೊಡಗಳನ್ನು ಹೊತ್ತುಕೊಂಡು ಒಳಹೋಗುತ್ತಿದ್ದುದು ಕಾಣಿಸಿತು. ರಾಜ ತಕ್ಷಣ ಅರ ಮನೆಯ ಹೆಬ್ಬಾಗಿಲ ಬಳಿ ಇದ್ದ ಒಂದು ಮರ ಹತ್ತಿ, ಹೆಣ್ಣಾಳುಗಳು ಅದರ ಕೆಳಗೆ ಹಾದುಹೋಗುವಾಗ ಬಗ್ಗಿ ಒಂದು ಕೊಡದೊಳಕ್ಕೆ ಮಂತ್ರದ ಉಂಗುರ ಹಾಕಿದ. ಚೆಂಪಕಳು ಅದರ ಗುರುತು ಹಿಡಿದಳು, ನನ್ನ ಗಂಡ ಕಯಾಂಗನ್ ತಲಪಿದ್ದಾನೆ ಎಂದು ಸಂತೋಷಗೊಂಡಳು. ಆದರೆ ಎಲ್ಲೆಲ್ಲಿ ವಿಚಾರಿಸಿದರೂ ರಾಜ



ಸೂತೊನ್‌ನಿಗೆ ಹೋಲುವಂತಹ ಯಾವನೂ ರಾಜ್ಯದಲ್ಲಿದ್ದದ್ದು ತಿಳಿಯದೆ ದುಃಖದಿಂದ ಕಾಹಿಲೆ ಬಿದ್ದಳು. ಅವಳ ತಂದೆ ಕಯಾಂಗನ್‌ನ ಎಲ್ಲ ಮಂತ್ರವೈದ್ಯರಿಗೂ ತೋರಿಸಿದ. ಯಾರಿಗೂ ಅವಳನ್ನು ಗುಣಪಡಿಸುವುದಾಗಲಿಲ್ಲ.

ಕೊನೆಗೆ. ನಾಡಿನಲ್ಲಿ ಅನಾಂಗ್ ಪಿತಾಮ್ ಎಂಬೊಬ್ಬ ಮಾಂತ್ರಿಕನಿದ್ದಾನೆ. ಅವನು ಮದ್ದು ಬಲ್ಲ ಎಂದು ದೊರೆಗೆ ಸುದ್ದಿ ಬಂದಿತು. ದೊರೆ ಅವಾಂಗ್ ಪಿತಾಮ್‌ನನ್ನು ಅರಮನೆಗೆ ಬರಮಾಡಿಕೊಂಡ. ಅವಾಂಗ್ ಪಿತಾಮ್‌ನ ವೇಷದಲ್ಲಿದ್ದ ರಾಜ ಸೂತೊನ್ ಮತ್ತು ಚೆಂಪಕಬೀರು ಒಟ್ಟುಗೂಡಿದರು. ಗಂಡನ ಮುಖ ಕಂಡ ಕೂಡಲೇ ಚೆಂಪಕಳ ಕಾಹಿಲೆ ಗುಣವಾಯಿತು.

ರಾಜ ಸೂತೊನ್ ಚೆಂಪಕಬೀರುವನ್ನು ತನ್ನ ಹೆಂಡತಿಯಾಗಿ ಭೂಮಿಗೆ ಕರೆದೊಯ್ಯಲು ಅವಳ ತಂದೆಯ ಅಪ್ಪಣೆ ಬೇಡಿದ. ಆದರೆ ತಂದೆ ಹೇಳಿದ. "ಮೊದಲು ನೀನು ಕಯಾಂಗನ್‌ನ ಒಬ್ಬ ರಾಜಕುಮಾರಿಗೆ ಯೋಗ್ಯನೆಂದು ಸಾಧಿಸಿ ತೋರಿಸಬೇಕು. ಮೊದಲು ಮುಂದಿರುವ ಕಾಡನ್ನು ಕಡಿದು ನೆಲಸಮ ಮಾಡು. ಆಗ ನೀನು ಮಾಂತ್ರಿಕನೆಂದು ನಂಬುತ್ತೇನೆ."

ರಾಜ ಸೂತೊನ್ ತನ್ನ ಪೂರ್ವಿಕರ ಮಂತ್ರಬಲವನ್ನು ಕುರಿತು ಧ್ಯಾನ ಮಾಡಿದ. ಅದು ಸಪ್ತಮ ಸ್ವರ್ಗದ ದೇವರಿಗೆ ಮುಟ್ಟಿತು. ದೇವರು ಸಹಾಯ ಕಳಿಸಿದ. ಸಾವಿರಗಟ್ಟಲೆ ಆನೆಗಳು ಬಂದು, ಕಾಡಿನ

ಮರಗಳೆಲ್ಲವನ್ನೂ ಒಂದೂ ಬಿಡದಂತೆ ಬೇರುಸಹಿತ ಕಿತ್ತವು. "ಮಹಾಪ್ರಭು, ನೀವು ಅಪ್ಪಣೆ ಮಾಡಿದ ಕೆಲಸವನ್ನು ಮಾಡಿಯಾಗಿದೆ" ಅಂದ ಸೂತೊನ್.

ಕಯಾಂಗನ್‌ನ ದೊರೆ ಹೇಳಿದ, "ಈಗ ಬೆಂಕಿಯಿಲ್ಲದೆ ಆ ಮರಗಳನ್ನೆಲ್ಲಾ ಸುಡಬೇಕು."

ರಾಜ ಸೂತೊನ್ ಮತ್ತೆ ಧ್ಯಾನಮಾಡಿದ. ಸಪ್ತಮ ಸ್ವರ್ಗದ ದೇವರು ಸಾವಿರಾರು ಕಿಡಿಕಾರುವ ಕೊಕ್ಕುಗಳುಳ್ಳ ಮಂತ್ರದ ಪಕ್ಕಿಗಳನ್ನು ಕಳಿಸಿಕೊಟ್ಟ. ಅವು ತಮ್ಮ ಬೆಂಕಿಕೊಕ್ಕುಗಳಿಂದ ಮರಗಳನ್ನು ಕುಟುಕಿಕುಟುಕಿ ಸುಟ್ಟುಹಾಕಿದುವು. "ಮಹಾಪ್ರಭು, ನೀವು ಅಪ್ಪಣೆ ಮಾಡಿದ ಕೆಲಸವನ್ನು ಮಾಡಿಯಾಗಿದೆ" ಅಂದ ಸೂತೊನ್.



ಈಗ ಕಯಾಂಗನ್‌ನ ದೊರೆ ಮೂರು ಚೀಲ ಸಾಸಿವೆಯನ್ನು ನೆಲದ ಮೇಲೆ ಸುರಿಸಿ, ಅದನ್ನು ಒಂದು ಕಾಳೂ ಬಿಡದೆ ಎತ್ತುವಂತೆ ಹೇಳಿದ. ರಾಜ ಸೂತೊನ್ ಮತ್ತೆ ಧ್ಯಾನಮಾಡಿದ. ದೇವರು ಹಲವಾರು ಸ್ವರ್ಗದ ಪಕ್ಷಿಗಳನ್ನು ಕಳಿಸಿಕೊಟ್ಟ. ಅವು ಸಾಸಿವೆಕಾಳುಗಳನ್ನು ಕೊಕ್ಕಿನಿಂದ ಎತ್ತಿ ಎತ್ತಿ, ಮೊದಲಿನಂತೆಯೇ ಚೀಲಕ್ಕೆ ತುಂಬಿದವು. "ಮಹಾಪ್ರಭು, ನೀವು ಅಪ್ಪಣೆ ಮಾಡಿದ ಕೆಲಸವನ್ನು ಮಾಡಿಯಾಗಿದೆ" ಅಂದ ಸೂತೊನ್.

"ಕೊನೆಯದೊಂದು ಉಳಿದಿದೆ," ಅಂದ ಕಯಾಂಗನ್‌ನ ದೊರೆ. "ಇಲ್ಲಿ ಏಳು ಕೋಣೆಗಳಿವೆ. ಅವುಗಳಲ್ಲಿ ಒಂದೊಂದರಲ್ಲೂ ನನ್ನ ಒಬ್ಬೊಬ್ಬ ಮಗಳಿದ್ದಾಳೆ. ಬಾಗಿಲಕಂಡಿಯಿಂದ ಅವರು ತಮ್ಮ ತಮ್ಮ ತೋರುಬೆರಳುಗಳನ್ನು ಹೊರಗೆ ಚಾಚುತ್ತಾರೆ. ಬರಿಯ ಬೆರಳು ನೋಡಿಯೇ ಚೆಂಪಕಳದ್ದು ಯಾವದು ಎಂದು ಹೇಳಬೇಕು. ಸರಿಯಾಗಿ ಉತ್ತರ ಕೊಟ್ಟರೆ ನೀನು ಚೆಂಪಕಳನ್ನು ಕರೆದೊಯ್ಯಬಹುದು. ಇಲ್ಲವೋ ನೀನು ಸತ್ತೆ ಅಂತ ತಿಳಿ."

ರಾಜ ಸೂತೊನ್ ಮತ್ತೆ ಧ್ಯಾನಕ್ಕೆ ತೊಡಗಿದ. ದೇವರು ಈ ಸಲ ಒಂದು

ಹಸಿರು ಚಿಟ್ಟೆ ಕಳಿಸಿ ಕೊಟ್ಟ. ಅದು ಅವನ ತಲೆಯ ಸುತ್ತ ಸುತ್ತಿ. ಕೋಣೆಗಳ ಮುಂದೆ ಹಾರುತ್ತ ಹೋಯಿತು. ಆಮೇಲೆ ನಡುವಿನ ಕೋಣೆಯ ಕಂಡಿಯಿಂದ ಹೊರಚಾಚಿದ್ದ ತೋರುಬೆರಳಿನ ಮೇಲೆ ಕೂತುಕೊಂಡಿತು. "ಅದೇ ಚೆಂಪಕಳ ಬೆರಳು" ಎಂದು ಅರಚಿದ ರಾಜ ಸೂತೋನ್.

ಕಯಾಂಗನ್‌ನ ದೊರೆಗೆ ತೃಪ್ತಿಯಾಯಿತು. "ನೀನು ನನ್ನ ಮಗಳ ಕೈಹಿಡಿಯಲು ಯೋಗ್ಯ. ಅಸಾಧ್ಯ ಕೆಲಸಗಳನ್ನು ಮಾಡಿ ತೋರಿಸುವ ಮಾಂತ್ರಿಕ ನೀನು." ಎಂದು ಅವನು ಒಪ್ಪಿಕೊಂಡ.

ಕಯಾಂಗನ್‌ನ ದೊರೆ ಒಂದು ಭವ್ಯ ಭೋಜನಕೂಟ ಏರ್ಪಡಿಸಿದ. ಅವನ ಪ್ರಜೆಗಳ ಸಮ್ಮುಖದಲ್ಲಿ ರಾಜ ಸೂತೋನ್ ಮತ್ತು ಚೆಂಪಕಬೀರು ಅವರ ಮದುವೆ ನೆರವೇರಿತು. ಈ ಸಲ ಕಯಾಂಗನ್ ದೇಶದ ಪದ್ಧತಿಗೆ ಅನುಸಾರವಾಗಿ. ರಾಜ ಸೂತೋನ್ ತನ್ನ ವೇಷ ತೊರೆದು. ಚೆಂಪಕಬೀರುವಿನೊಂದಿಗೆ ಭೂಮಿಯ ಮೇಲಿನ ತನ್ನ ರಾಜ್ಯಕ್ಕೆ ಬಂದ. ಅವರು ಆಮೇಲೆ ಕೊನೆಯವರೆಗೂ ಸುಖವಾಗಿದ್ದರು.

ಹೇಳಿದವರು: **ಸಾಲೆ ದೌದ್**

ಚಿತ್ರಗಳು: **ಮೊವ್ರೋರ್ ಶಾರಿಮುನ್ ಹಸನ್**

ನೇಪಾಳ

# ಕುಂಬಳಕಾಯಿಯ ಮುದುಕಿ

ಹಿಂದೆ, ಬಹಳ ಹಿಂದೆ, ಒಬ್ಬ ಮುದುಕಿ ದೂರದ ಊರಿನಲ್ಲಿ ವಾಸವಾಗಿದ್ದ ತನ್ನ ಮಗಳನ್ನು ನೋಡಿ ಬರಲು ಹೊರಟಳು. ಹೋಗುತ್ತ ಹೋಗುತ್ತ ದಾರಿಯಲ್ಲಿ ಒಂದು ದಟ್ಟವಾದ ಕಾಡು ಸಿಕ್ಕಿತು. ಅಲ್ಲಿ ಅವಳಿಗೆ ಒಂದು ನರಿ ಎದುರಾಯಿತು. ಅದು ಹೇಳಿತು, "ನೋಡು ಮುದುಕವ್ವ, ಹತ್ತು ದಿನದಿಂದ ನನಗೆ ಹೊಟ್ಟೆಗಿಲ್ಲ. ನೀನು ಇನ್ನು ಮುಂದೆ ಹೋಗುವ ಹಾಗಿಲ್ಲ. ನಾನು ನಿನ್ನನ್ನ ತಿನ್ನತೀನಿ."

ಮುದುಕಿ ಹೇಳಿದಳು, "ಸ್ವಲ್ಪ ತಾಳ್ಮೆ ತಂದುಕೊ, ಮುದ್ದು ನರಿ. ಮಗಳನ್ನ ನೋಡೋಕ್ಕೆ ಹೋಗ್ತಿದೀನಿ. ಒಂದು ತಿಂಗಳು ಬಿಟ್ಟು ಬರ್ತೀನಿ. ಈಗ ತೆಳ್ಳಗಿದೀನಿ, ಆಗ ದಪ್ಪನಾಗಿ ಬಂದಿರ್ತೀನಿ. ಬೇಕೂ ಅಂದಾಗ ತಿನ್ನುವಿಯಂತೆ."

"ಹೌದು. ಸಣ್ಣ ಹೆಂಗಸಿಗಿಂತ ದಪ್ಪ ಹೆಂಗಸು ಒಳ್ಳೆಯ ಆಹಾರವಾಗ್ತಾಳೆ." ಎಂದು ಯೋಚಿಸಿ, ನರಿ ಅವಳನ್ನು ಹೋಗಗೊಟ್ಟಿತು. ಬೇರೆ ಯಾರೂ ತನಗೆ ಅಡ್ಡಿಯಾಗದಿರಲೆಂದು ಆಶಿಸುತ್ತ ಮುದುಕಿ ಬೇಗಬೇಗನೆ ಕಾಲುಹಾಕಿ ಹೊರಟಳು.

ಸ್ವಲ್ಪ ದೂರ ಹೋಗುವುದರೊಳಗೆ ಕಾಡಿನ ಕ್ರೂರ ದೊರೆ ಹುಲಿ ಎದುರಾಗಿ, ಗುರುಗುಟ್ಟಿತು, "ಹ್ಞಾ. ಇಪ್ಪತ್ತುದಿನದಿಂದ ಹೊಟ್ಟೆಗಿಲ್ಲ. ಇವತ್ತು ನೀನೇ ನನಗೆ ಆಹಾರ. ಸಾಯೋಕ್ಕೆ ಸಿದ್ಧಳಾಗು, ಮುದುಕವ್ವ."

"ಮೃಗರಾಜ, ಈಗ ನನ್ನನ್ನ ಬಿಟ್ಟುಬಿಡು. ತಿಂಗಳ ಕೊನೇಲಿ ಮಗಳ ಮನೆಯಿಂದ ಹಿಂದಿರುಗಿ ಬರೋವಾಗ ತಿನ್ನುವಿಯಂತೆ. ಅಷ್ಟು ಹೊತ್ತಿಗೆ ಮೈಕೈ ತುಂಬಿಕೊಂಡು ಹೆಚ್ಚು ರುಚಿಯಾಗಿರ್ತೀನಿ. ಈಗಿನ ಹಾಗೆ ಬಡಬಡಕಲಾಗಿ ಬಿರುಸಾಗಿರೋಲ್ಲ," ಅಂದಳು ಮುದುಕಿ.

ಹುಲಿ ಅವಳನ್ನು ಬಿಟ್ಟುಕೊಟ್ಟಿತು.

ಸ್ವಲ್ಪ ದೂರದಲ್ಲಿ, ಕೋತಿಗಳ ದೊರೆ ತನ್ನ ಬಳಗದೊಂದಿಗೆ ಮುದುಕಿಗೆ ಅಡ್ಡವಾಯಿತು. ಅದು ಅವಳನ್ನು ಮೋಸಗೊಳಿಸಲು, ಒಳ್ಳೆಯ ಸುವಾಸನೆಯ ಹೂಗಳಿಂದ ಕಟ್ಟಿದ ಹಾರ ಹಾಕಿ ಸ್ವಾಗತಿಸಿತು. ಆಮೇಲೆ ಹಲ್ಲುಕಿರಿಯುತ್ತ, "ಅವ್ವ, ಒಳ್ಳೇ ಹೊತ್ತಿಗೆ ಸರಿಯಾಗಿ ಬಂದಿದಿ. ನಿನ್ನನ್ನ ತಿನ್ನೋದು ನನ್ನ ಪಾಲಿನ ಸಂತೋಷ" ಅಂದಿತು.

ಮುದುಕಿ ಹೇಳಿದಳು, "ಸ್ವಲ್ಪ ತಾಳಿಕೊ, ಮಂಗರಾಜ. ಮಗಳ ಮನೆಗೆ ಹೊರಟಿದೀನಿ. ನನ್ನನ್ನ ಬಿಟ್ಟುಕೊಡು. ಇನ್ನೊಂದು ತಿಂಗಳಲ್ಲಿ ಉಂಡು ದಪ್ಪವಾಗಿ ಬರ್ತೀನಿ. ಆಗ ತಿನ್ನುವಿಯಂತೆ."

ಆದರೆ ಕೋತಿಗಳ ದೊರೆ ನರಿ ಹುಲಿಗಳಷ್ಟು ಸುಲಭವಾಗಿ ಮೋಸಹೋಗಲಿಲ್ಲ. ಅದರ ಅಪ್ಪಣೆ ಯಂತೆ ಕೋತಿಗಳ ದಂಡು ಅರಚುತ್ತ ಕಿರಚುತ್ತ ಅವಳನ್ನು ಮುತ್ತಿತು. ಆ ದಂಡಿನ ಮರಿಗಳು ಅವಳ ಹೆಗಲ ಮೇಲೆ ಹತ್ತಿ ತಲೆಯ ಮೇಲಕ್ಕೆ ನೆಗೆಯುವಷ್ಟು ಧಿಟ್ಟತನ ತೋರಿಸಿದವು.

ಮುದುಕಿ ಗೋಗರೆದಳು, ದಮ್ಮಯ್ಯಗುಡ್ಡೆ ಇಕ್ಕಿದಳು. ಆದರೆ ಮಂಗರಾಜ ಮಾತ್ರ "ಬುದ್ಧನ ಮೇಲೆ ಆಣೆಯಿಟ್ಟು ಹೇಳುವವರೆಗೂ ನೀನು ನಿಜವಾಗಿ ವಾಪಸು ಬರ್ತಿ ಅಂತ ನಂಬಿಕೆ ಬರೋಲ್ಲ" ಅಂದುಬಿಟ್ಟಿತು.

ಮುದುಕಿಗೆ ಆಣೆ ಇಡದೇ ಬೇರೆ ದಾರಿಯಿರಲಿಲ್ಲ. ಆಮೇಲೆ ಕೋತಿಗಳ ದೊರೆ ಅವಳನ್ನು ಹೋಗ ಗೊಟ್ಟಿತು. ಮುದುಕಿ ಕೊನೆಗೂ ಮಗಳ ಮನೆ ಸೇರಿ ಸುಖವಾಗಿದ್ದಳು. ಆದರೆ ಕಾಲ ಕಳೆದು, ಬಹುಬೇಗ ತಿಂಗಳ ಕೊನೆ ಬಂದಿತು. ಮುದುಕಿಗೆ ತಾನು ಪ್ರಾಣಿಗಳಿಗೆ ಕೊಟ್ಟ ವಚನ ನೆನಪಿಗೆ ಬಂದಿತು. ಮಗಳಿಗೆ ನಡೆದ ಸಂಗತಿಯೆಲ್ಲವನ್ನೂ ತಿಳಿಸಿದಳು. ತಾಯಿಮಗಳಿಬ್ಬರೂ ಒಟ್ಟಾಗಿ ಬುದ್ಧಿ ಓಡಿಸಿ, ಒಂದು ಉಪಾಯ ಯೋಚಿಸಿದರು. ಮಗಳು ಎರಡು ದೊಡ್ಡ ಕುಂಬಳಕಾಯಿಗಳನ್ನು ತಂದಳು. ಒಂದು ಸೀಸೆಯಂತಿತ್ತು, ಅದು ಲಂಕ. ಇನ್ನೊಂದು ಹಾವಿನಂತಿತ್ತು, ಅದು ಚಿಂಡ. ಮಗಳು ತಾಯಿಯನ್ನು ಲಂಕದಲ್ಲಿಟ್ಟು ಚಿಂಡಕ್ಕೆ ಮುನ್ನಡೆದು ದಾರಿತೋರುತ್ತ ಹೋಗಲು ಹೇಳಿದಳು. ಹೀಗೆ ಲಂಕ ಚಿಂಡಗಳೆರಡೂ ಕೋತಿ, ಹುಲಿ, ನರಿಗಳು ಹಸಿವಿನಿಂದ ಮುದುಕಿಗಾಗಿ ಕಾಯುತ್ತ ಕುಳಿತಿದ್ದ ಕಾಡಿಗೆ ಬಂದವು.

ದಾರಿಯ ಚೌಕದಲ್ಲಿ ಕೋತಿಗಳೆಲ್ಲವೂ ಒಟ್ಟಿಗೆ ಸೇರಿದ್ದವು. ಕ್ಷಣಕ್ಷಣಕ್ಕೂ ಅವುಗಳ ಸಂಶಯ ಬೆಳೆಯುತ್ತ ಹೋಯಿತು. ಇದ್ದಕ್ಕಿದ್ದಂತೆ ವಿಚಿತ್ರವಾದ ಬುಡುಬುಡು ಶಬ್ದ ಕೇಳಿಬಂದಿತು. ನೋಡಿದರೆ ಮುಂದೆ ಚಿಂಡ ನಡೆದುಬರುತ್ತಿದೆ, ಹಿಂದಿನಿಂದ ದೊಡ್ಡ ಲಂಕ ಉರುಳಿ ಬರುತ್ತಿದೆ.

ಚಿಂಡ ಕೂಗತೊಡಗಿತು, "ದಾರಿ! ದಾರಿ! ಹೀಗೆ ನಮಗೆ ಅಡ್ಡ ಬರುವುದೆಂದರೇನು?"



ಈ ಅನಿರೀಕ್ಷಿತವಾದ ಸವಾಲನ್ನು ಕೇಳಿ ಬೆಚ್ಚಿಬಿದ್ದ ಮಂಗರಾಜ ನಮ್ರವಾಗಿ ಹೇಳಿತು, "ನಮಗೆ ಊಟಕ್ಕೆ ಒದಗುವುದಾಗಿ ಒಬ್ಬ ಮುದುಕಿ ಮಾತುಕೊಟ್ಟು ಹೋಗಿದ್ದಳು. ಅವಳಿಗೆ ಕಾಯ್ತಿದೀವಿ, ಅಷ್ಟೆ. ದಾರೀಲಿ ಯಾವಳಾದರೂ ಮುದುಕಿ ನಿಮ್ಮ ಕಣ್ಣಿಗೆ ಬಿದ್ದಳೆ?"

"ಮುದುಕೀನ ಕಟ್ಟಿಕೊಂಡು ನಮಗೇನಾಗಬೇಕಾಗಿದೆ? ದಾರಿ ಬಿಡಿ, ದಾರಿ," ಚಿಂಡ ದರ್ಪದಿಂದ

ಹೇಳಿತು. ಚೆಂಡ, ಲಂಕ ಬುಡಬುಡನೆ ಮುನ್ನಡೆದವು. ಮುಂದೆ ಹುಲಿಯಿದ್ದಲ್ಲಿಗೆ ಬಂದವು. ಮುದುಕಿ ಬಂದಾಗ ಅವಳ ಮಾತೊಂದಕ್ಕೂ ಕಿವಿಗೊಡದೆ. ಅವಳ ಮೈಮೇಲೆ ನೆಗೆದು ನುಂಗಿಬಿಡುವುದಾಗಿ ನಿಶ್ಚಯಿಸಿಕೊಂಡು ಹುಲಿ ಕಾಯುತ್ತ ಕುಳಿತಿತ್ತು.

ಮೊದಲು ಹುಲಿಗೆ ಒಂದು ವಿಚಿತ್ರ ಶಬ್ದ ಕೇಳಿಸಿತು. ನೋಡಿದರೆ ಮುಂದಿನಿಂದ ಚೆಂಡ ತನ್ನ ಕಡೆಗೇ ಉರುಳಿ ಬರುತ್ತಿದೆ: ಹಿಂದೆ ಲಂಕ ಬೀಗುತ್ತ ಅದನ್ನು ಹಿಂಬಾಲಿಸುತ್ತಿದೆ.

"ದಾರಿ ! ದಾರಿ !" ಚೆಂಡ ಕೂಗಿತು.

ಹುಲಿ ತಬ್ಬಿಬ್ಬಾಗಿ ದಾರಿ ಬಿಟ್ಟಿತು. ಆಮೇಲೆ ಥಟ್ಟನೆ ನೆನಪಾಗಿ "ನನಗೆ ಊಟಕ್ಕಾಗುವುದಾಗಿ ಮಾತುಕೊಟ್ಟಿದ್ದ ಮುದುಕಿಯನ್ನು ನೀವೇನಾದರೂ ನೋಡಿದಿರಾ?" ಅಂದಿತು.

"ಮುದುಕೀನ ಕಟ್ಟಿಕೊಂಡು ನಮಗೇನಾಗಬೇಕಾಗಿದೆ. ದಾರಿ ಬಿಡು. ದಾರಿ ಬಿಡು." ಚೆಂಡ ಹೇಳಿತು. ಚೆಂಡ, ಲಂಕ ಮುಂದೆ ಹೋದವು.

ಈ ಹೊತ್ತಿಗಾಗಲೇ ನರಿಗೆ ಕಾಡಿನ ದಾರಿಯಲ್ಲಿ ಉರುಳಾಡುತ್ತಾ ಹೊರಟಿದ್ದ ಈ ವಿಚಿತ್ರ ವಾಹನಗಳ ಬಗ್ಗೆ ತಿಳಿದಿತ್ತು. ಅದಕ್ಕೆ ಅನುಮಾನ ಬಲವಾಯಿತು. ಅದು ಒಂದು ಚೂಪಾದ ಕಲ್ಲನ್ನು ಆರಿಸಿ ರಸ್ತೆಯ ಮಧ್ಯದಲ್ಲಿಟ್ಟು. ಮರದ ಹಿಂದೆ ಅವಿತುಕೊಂಡು ಕಾಯುತ್ತ ಕುಳಿತಿತು.

ಅಷ್ಟರಲ್ಲಿ ಚೆಂಡ. ಲಂಕ ರಭಸವಾಗಿ ಆ ಕಡೆ ಬಂದವು. ಲಂಕದೊಳಗೆ ಅವಿತುಕೊಂಡಿದ್ದ ಮುದುಕಿ ಕೋತಿ ಹುಲಿಗಳಿಗೆ ಮಣ್ಣುಮುಕ್ಕಿಸಿದ್ದನ್ನು ನೆನಸಿಕೊಂಡು ಮೊಕ್ಕನೆ ನಗುತ್ತಿದ್ದಳು.

ಲಂಕ ಚೂಪುಗಲ್ಲಿಗೆ ತಗಲಿ ಬುಡದಿಂದ ತಲೆಯವರೆಗೂ ಎರಡು ಹೋಳಾಗಿ ಸೀಳಿಕೊಂಡಿತು. ಮುದುಕಿ ಧೊಪ್ಪನೆ ರಸ್ತೆಗೆ ಬಿದ್ದಳು. ಇಷ್ಟು ಹೊತ್ತಿಗೆ ಹುಲಿ ಕೋತಿಗಳಿಗೆ ತಮಗಾದ ಮೋಸದ ಅರಿವಾಗಿತ್ತು. ಅವು ಲಂಕದ ಬೆನ್ನಟ್ಟಿ ಬರುತ್ತಿದ್ದವು. ಇನ್ನೇನು ನರಿ ಮುದುಕಿಯ ಮೈಮೇಲೆ ಬಿದ್ದು ಅವಳನ್ನು ತಿಂದುಹಾಕಬೇಕೆನ್ನುವಷ್ಟರಲ್ಲಿ ಹುಲಿಕೋತಿಗಳು ನಾಗಾಲೋಟದಲ್ಲಿ ಅಲ್ಲಿಗೆ ಬಂದವು.

ಮುದುಕಿಗೆ ತಾನು ಸಿಕ್ಕಿಬಿದ್ದದ್ದು ಗೊತ್ತಾಯಿತು. ಆದರೂ ಅವಳು ಆಸೆ ಬಿಡಲಿಲ್ಲ. ಆ ಪ್ರಾಣಿಗಳು ತನ್ನನ್ನು ತಿನ್ನುವುದು ಸರಿಯೆಂದು ಒಪ್ಪಿದಳು. ಆದರೆ ಹಾಗೆಯೇ ತಿನ್ನುವುದಕ್ಕಿಂತ ಸುಟ್ಟು ತಿಂದರೆ ಹೆಚ್ಚು ರುಚಿಯಾಗಿರುವುದಿಲ್ಲವೆ ಅಂದಳು.

ಪ್ರಾಣಿಗಳು ಅವಳನ್ನು ಸುಡಲು ಬೆಂಕಿಹೂಡಿದವು. ಸಾಧ್ಯವಾದಷ್ಟೂ ತಡಮಾಡೋಣವೆಂದು "ಬೆಂಕಿ ಪೂರ್ತಿ ಆರಿ ಬೂದಿಯಾದರೆ ವಾಸಿ. ಆಗ ಬೇಗ ಸುಡಬಹುದು" ಎಂದು ಸೂಚನೆ ಕೊಟ್ಟಳು ಮುದುಕಿ.

ಬೆಂಕಿ ಉರಿದು ಬೂದಿಯಾದ ಮೇಲೆ ಮುದುಕಿ ಒಂದು ಕಲ್ಲು ತಂದು ಬೂದಿಯ ಮಧ್ಯೆ ಇಟ್ಟು ಅದರ ಮೇಲೆ ಕುಳಿತುಕೊಂಡಳು. ಪ್ರಾಣಿಗಳು ಇನ್ನೇನು ತಮ್ಮ ಅಡಿಗೆ ತಯಾರಾಯಿತೆಂದುಕೊಂಡು ಪದ್ಧತಿಯಂತೆ ಊಟಕ್ಕೆ ಮುಂಚೆ ಪ್ರಾರ್ಥನೆಮಾಡಲು ಕಣ್ಣುಮುಚ್ಚಿದವು.

ಆ ಕ್ಷಣ ಮುದುಕಿ ಒಂದು ಬೊಗಸೆ ಬೂದಿಯನ್ನು ಎತ್ತಿ ತೆಗೆದು, ಪ್ರಾಣಿಗಳು ಕಣ್ಣುಬಿಟ್ಟ ತಕ್ಷಣ ಅವುಗಳ ಮುಖಕ್ಕೆ ಎರಚಿದಳು. ಅವುಗಳು ಚೇತರಿಸಿಕೊಳ್ಳುವ ಮೊದಲೇ ಕಾಡು ಬಿಟ್ಟೋಡಿ ಪಾರಾದಳು.

ನರಿ, ಹುಲಿ, ಕೋತಿಗಳು ಹಸಿವು ಮತ್ತು ಕೋಪಾವೇಶಗಳಿಂದ ಮುದುಕಿಗಾಗಿ ಎಲ್ಲೆಲ್ಲೂ ಹುಡುಕಾಡಿದವು. ಅವಳು ಮಾತ್ರ ಮತ್ತೆ ಕಾಣಿಸಲಿಲ್ಲ.

ಹೇಳಿದವರು: **ಮಾಧವಲಾಲ ಕರ್ಮಾಚಾರ್ಯ**
ಚಿತ್ರಗಳು: **ತೇಕ್‌ಬೀರ್ ಮುಖಿಯಾ**



ಪಾಕಿಸ್ತಾನ

# ರೈತನ ಹೆಂಡತಿ ಮತ್ತು ಹುಲಿ



ಒಂದು ದಿನ ಒಬ್ಬ ರೈತ ಎತ್ತು ಕಟ್ಟಿಕೊಂಡು ಹೊಲ ಉಳಲು ಹೋದ. ಅವನಿನ್ನೂ ಮೊದಲ ಸಾಲು ನೇಗಿಲು ಹೊಡೆದು ಮುಗಿಸುವಷ್ಟರಲ್ಲಿ ಹಿಂದಿನಿಂದ ಒಂದು ಹುಲಿ ಬಂದು, "ದೇವರು ನಿನ್ನನ್ನ ನೆಮ್ಮದಿಯಾಗಿಟ್ಟಿರಲಿ. ಈವೊತ್ತು ಹೇಗಿದೀಯಣ್ಣ?" ಎಂದು ಕೇಳಿತು.

ರೈತ ಭಯದಿಂದ ನಡುಗುತ್ತ, ಅಂತಹ ಹೊತ್ತಿನಲ್ಲಿ ನಮ್ರತೆ ತೋರುವುದೇ ವಿವೇಕವೆಂದು ಯೋಚಿಸಿ, "ಚಂದಾಗಿದೀನಿ, ಪ್ರಭು. ನೀವು ಹೇಗಿದೀರಿ?" ಅಂದ.

"ನಿನ್ನ ಎತ್ತುಗಳನ್ನ ತಿಂದು ಬರಲಿ ಅಂತ ದೇವರು ನನ್ನನ್ನ ಕಳಿಸಿಕೊಟ್ಟಿದ್ದಾನೆ. ದೇವರು ಅಂದರೆ ನಿನಗೆ ಭಯಭಕ್ತಿ ಅಂತ ಬಲ್ಲೆ. ಎಲ್ಲಿ, ಬೇಗ ನೇಗಿಲು ಬಿಚ್ಚು," ಎಂದು ಹುಲಿ ನಗುನಗುತ್ತ ಹೇಳಿತು.

ಹುಲಿ ತಿನ್ನಬಯಸಿರುವುದು ತನ್ನನ್ನಲ್ಲ, ತನ್ನ ಎತ್ತುಗಳನ್ನು ಎಂದು ಗೊತ್ತಾದೊಡನೆಯೇ ರೈತನಿಗೆ ಹೋದ ಧೈರ್ಯ ವಾಪಸುಬಂದಿತು. ಅವನು ಹೇಳಿದ, "ನೀವೆಲ್ಲೋ ತಪ್ಪು ತಿಳಿದುಕೊಂಡಿದೀರಿ ಅಂತ ಅನ್ನಿಸುತ್ತೆ, ಪ್ರಭು. ಈ ಹೊಲ ಉಳಲಿ ಅಂತ ದೇವರು ನನ್ನನ್ನ ಭೂಮಿಗೆ ಕಳಿಸಿದ. ಎತ್ತಿಲ್ಲದೆ ಹೊಲ ಉಳೋಕ್ಕಾಗೋಲ್ಲವಲ್ಲ. ನೀವು ಮತ್ತೆ ಹೋಗಿ ಸರಿಯಾಗಿ ಕೇಳಿಕೊಂಡು ಬಂದರೆ ಹೇಗೆ?"

"ಸುಮ್ಮನೆ ತಡಮಾಡಿ ಪ್ರಯೋಜನವಿಲ್ಲ. ಅಲ್ಲದೆ, ನಿನ್ನನ್ನ ವೃಥಾ ಕಾಯಿಸೋಕ್ಕೆ ಇಷ್ಟವಿಲ್ಲ.

ನೀನು ನೇಗಿಲು ಬಿಚ್ಚು. ಒಂದು ಕ್ಷಣದಲ್ಲಿ ನಾನೂ ಎತ್ತುಗಳನ್ನ ತಿನ್ನೋದಕ್ಕೆ ತಯಾರಾಗ್ತೀನಿ" ಎಂದು ಹೇಳಿ, ಹುಲಿ ತನ್ನ ಹಲ್ಲು ಉಗುರುಗಳನ್ನು ದಿಗಿಲುಹುಟ್ಟಿಸುವಂತೆ ಮಸೆಯ ತೊಡಗಿತು.

ರೈತ ಹುಲಿಯ ಕಾಲಿಗೆ ಬಿದ್ದು ಎತ್ತುಗಳ ಜೀವ ಉಳಿಸುವಂತೆ ಗೋಗರೆದ. ಬದಲು, ತನ್ನ ಹೆಂಡತಿಗೆ ಹೇಳಿ ಅವಳ ಒಂದು ಮೈದುಂಬಿದ ಕರೆಯುವ ಹಸುವನ್ನು ಕೊಡಿಸುವುದಾಗಿ ಹೇಳಿದ.

ಅದಕ್ಕೆ ಹುಲಿ ಒಪ್ಪಿತು. ರೈತ ಎತ್ತುಗಳನ್ನೂ ಅಟ್ಟಿಕೊಂಡು ಬೇಗಬೇಗನೆ ಮನೆಗೆ ಬಂದ. ಅವನ ಹೆಂಡತಿ ಕಷ್ಟಪಟ್ಟು ದುಡಿಯುವ ಹುರುಪಿನ ಹೆಂಗಸು. ಗಂಡ ಹೊತ್ತಿಗೆ ಮುಂಚೆ ಹೊಲದಿಂದ ವಾಪಸು ಬಂದುದನ್ನು ನೋಡಿ ಅವಳಂದಳು, "ಯಾಕಿಷ್ಟು ಮೈಗಳ್ಳತನ? ನನ್ನ ಮನೆಗೆಲಸ ಈಗಿನ್ನೂ ಶುರು ವಾಗಿದೆ. ನೀವಾಗಲೇ ವಾಪಸು ಬಂದಿರಲ್ಲ."

ರೈತ ಹುಲಿ ಬಂದದ್ದು, ಎತ್ತುಗಳನ್ನು ಉಳಿಸಲು ಬದಲಿಗೆ ಹಸು ಕೊಡುವುದಾಗಿ ಮಾತು ಕೊಟ್ಟದ್ದು ಎಲ್ಲವನ್ನೂ ವಿವರಿಸಿ ಹೇಳಿದ. ಅದನ್ನು ಕೇಳಿ ಹೆಂಡತಿ ಅರಚಿದಳು, "ಯಾರಾದರೂ ಒಪ್ಪೋ ಮಾತೇ! ನನ್ನ ಚಂದುಳ್ಳಿ ಹಸೂನ ಕೊಟ್ಟು ನಿಮ್ಮ ದಡ್ಡೆತ್ತುಗಳನ್ನು ಉಳಿಸಿಕೊಳ್ಳೋದು ಅಂದರೇನು? ಹುಲೀಗೆ ಹಸೂನ ಕೊಟ್ಟರೆ ಮಕ್ಕಳಿಗೆ ಹಾಲೆಲ್ಲಿಂದ ಬರುತ್ತಂತೆ? ಬೆಣ್ಣೆ ತುಪ್ಪ ಇಲ್ಲದೇ ನಾನು ಅಡಿಗೆ ಏನು ಮಾಡಲಿ?"

"ಅದೇನೋ ಸರಿ," ರೈತ ಎದುರುಹೇಳಿದ. "ಆದರೆ ಕಾಳಿಲ್ಲದೇ ರೊಟ್ಟಿ ಹೇಗೆ ತಟ್ಟೀಯಂತೆ? ಉಳೋಕೆ ಎತ್ತಿಲ್ಲದೇ ಕಾಳು ಎಲ್ಲಿಂದ ಬರುತ್ತಂತೆ? ಹಾಲು ತುಪ್ಪ ಇಲ್ಲದೇ ಹೋದರೂ ನಡೆಯುತ್ತೆ, ರೊಟ್ಟಿ ಇಲ್ಲದೇ ನಡೆಯುತ್ತಯೆ? ಬೇಗ ಹಸೂನ ಬಿಚ್ಚಿಕೊಡು."

"ಎಂಥ ಪೆದ್ದರು ನೀವು! ತಲೇಲಿ ಒಂದು ತೊಲ ಬುದ್ಧಿ ಇದ್ದಿದ್ದರೆ ಈ ಕಷ್ಟದಿಂದ ಪಾರಾಗೋಕ್ಕೆ ಬೇರೆ ಏನಾದರೂ ಉಪಾಯ ಯೋಚಿಸುತ್ತಿದ್ದಿರಿ," ಅಂದಳು ಹೆಂಡತಿ.

ಗಂಡ ಕೋಪದಿಂದ, "ಸರಿ ಹಾಗಾದರೆ. ನೀನೇ ಏನಾದರೂ ಯೋಚಿಸು" ಅಂದ.

"ಆಗಲಿ," ಅಂದಳು ಹೆಂಡತಿ. "ಆದರೆ ಉಪಾಯಾನೂ ಯೋಚಿಸಿ, ನೀವು ಹೇಳಿದ ಹಾಗೆ ಕೇಳೋದು ಎರಡೂ ಸಾಧ್ಯವಿಲ್ಲ. ನಾನು ಉಪಾಯ ಯೋಚಿಸಬೇಕಾದರೆ ನೀವು ನಾನು ಹೇಳಿದ ಹಾಗೆ ಕೇಳಬೇಕು. ಹೋಗಿ ಹುಲೀಗೆ ಹೇಳಿ, ಹಸು ನನ್ನ ಜತೆ ಬರ್‍ಲಿಲ್ಲ. ನನ್ನ ಹೆಂಡತಿ ಕರಕೊಂಡು ಬರ್‍ತಿದಾಳೆ ಅಂತ."



ಗಂಡ ಶುದ್ಧ ಹೇಡಿ. ಹುಲಿಯ ಬಳಿ ಬರಿಗೈಯಲ್ಲಿ ಹೋಗುವ ಧೈರ್ಯವಿರಲಿಲ್ಲ. ಆದರೆ ಬೇರೆ ದಾರಿಯಿಲ್ಲದೆ ಹೆಂಡತಿ ಹೇಳಿದಂತೆ ಮಾಡಿದ. ಅವನು ಬಂದಾಗ ಹುಲಿ ಹಸಿವಿನಿಂದ ಹಲ್ಲುಉಗುರುಗಳನ್ನು ಇನ್ನೂ ಮಸೆಯುತ್ತಲೇ ಕುಳಿತಿತ್ತು. ತನ್ನ ಊಟಕ್ಕೆ ಇನ್ನೂ ಕೊಂಚ ಹೊತ್ತು ಕಾಯಬೇಕಾಗಿ ಬಂದಿದೆ ಯೆಂದು ತಿಳಿದಾಗ, ಅದು ಘೋರವಾಗಿ ಆರ್ಭಟಿಸುತ್ತ

ಬಾಲ ಅಪ್ಪಳಿಸಿ ಮೀಸೆ ಕುಣಿಸಿತು. ಅವನ್ನು ಕಂಡು ಬಡ ರೈತನಿಗೆ ನಡುಕ ಹತ್ತಿ, ಅವನ ಮೊಣಕಾಲುಗಳು ಒಂದಕ್ಕೊಂದಕ್ಕೆ ಬಡಿಯತೊಡಗಿದವು.

ಗಂಡ ಮನೆಬಿಟ್ಟ ಮೇಲೆ ಹೆಂಡತಿ ಲಾಯಕ್ಕೆ ಹೋಗಿ ಒಂದು ಕುದುರೆಮರಿಗೆ ಜೀನು ಕಟ್ಟಿದಳು. ಗಂಡನ ಬಟ್ಟೆಗಳಲ್ಲಿ ಒಳ್ಳೆಯದನ್ನು ಆರಿಸಿ ತೊಟ್ಟುಕೊಂಡಳು. ಆವಷ್ಟು ಎತ್ತರವಾಗಿ ಕಾಣಲೆಂದು ರುಮಾಲನ್ನು ಮೇಲೆತ್ತಿ ಕಟ್ಟಿದಳು. ಕುದುರೆ ಹತ್ತಿ ಹೊಲಕ್ಕೆ ಬಂದಳು.

ಗಂಡಸಿನಂತೆ ಠೀವಿಯಿಂದ ತೊನೆಯುತ್ತ ಕುದುರೆ ನಡೆಸಿಕೊಂಡು ಬಂದು, ಹೊಲದ ಕಡೆಗೆ ದಾರಿ ತಿರುಗುವಲ್ಲಿ ನಿಂತು ಜೋರಾಗಿ ಕೂಗಿದಳು. "ದೇವರೇ, ಹೊಲದಲ್ಲಿ ಊಟಕ್ಕೆ ಒಂದು ಹುಲಿ ಸಿಗುವಂತೆ ಮಾಡಪ್ಪ ! ನಿನ್ನೆ ಬೆಳಗಿನ ತಿಂಡಿಗೆ ಮೂರು ಹುಲಿ ತಿಂದಾಗಿನಿಂದ ಮತ್ತೆ ಹುಲಿ ತಿಂದಿಲ್ಲ."

ಹುಲಿಗೆ ಆ ಮಾತು ಕೇಳಿಸಿತು. ಅವನ್ನು ಆಡಿದ ವ್ಯಕ್ತಿ



ಧೈರ್ಯದಿಂದ ತನ್ನ ಕಡೆಗೇ ಕುದುರೆ ಸವಾರಿ ಮಾಡುತ್ತ ಬರುತ್ತಿರುವುದನ್ನು ನೋಡಿ ಅದು ಬಾಲ ಮುರುಟಿಕೊಂಡು ಕಾಡಿನತ್ತ ಓಟ ಓಡಿತು. ಹುಲಿಗಳು ತಾವು ತಿಂದ ಮೇಲೆ ಉಳಿವ ಮೂಳೆಯನ್ನು ತಿನ್ನಲೆಂದು ತಮ್ಮ ಜತೆ ಸದಾ ಒಂದೊಂದು ನರಿಯನ್ನು ಇಟ್ಟುಕೊಂಡಿರುತ್ತವೆ. ಹುಲಿ ಓಡಿವ ವೇಗಕ್ಕೆ ಅಲ್ಲಿದ್ದ ತನ್ನ ಬಂಟ ನರಿಗೇ ಡಿಕ್ಕ ಹೊಡೆದು ಅದು ಕೆಳಗೆ ಉರುಳುವುದರಲ್ಲಿತ್ತು.

"ಪ್ರಭು, ಪ್ರಭು," ನರಿ ಅರಚಿತು. "ಇಷ್ಟು ಅವಸರದಲ್ಲಿ ಎಲ್ಲಿ ಹೊರಟಿದ್ದೀರಿ?"

ಹುಲಿ ಏದುಸಿರು ಬಿಡುತ್ತ ಹೇಳಿತು, "ಓಡು, ಓಡು, ನೀನೂ ಓಡು. ಆ ದೂರದ ಹೊಲದಲ್ಲಿ ಬೆಳಗಿನ ತಿಂಡಿಗೆ ಮೂರು ಹುಲಿ ತಿನ್ನೋ ಒಂದು ದೆವ್ವ ಕುದುರೆ ಹತ್ತಿ ಬರ್‍ತಿದೆ."

ಅದನ್ನು ಕೇಳಿ ನರಿ ಗೊಳ್ಳನೆ ನಕ್ಕಿತು. "ದಣಿಗಳ ಕಣ್ಣಿಗೆಲ್ಲೋ ಬಿಸಿಲಿನ ಝಳ ಬಡಿದಿದೆ ಅಂತ ಕಾಣುತ್ತೆ. ಅದು ಯಾವ ಕುದುರೆ ಸವಾರನೂ ಅಲ್ಲ, ರೈತನ ಹೆಂಡತಿ ಗಂಡಸಿನ ವೇಷ ತೊಟ್ಟು ಬಂದಿದ್ದಾಳೆ ಅಷ್ಟೆ."

ಹುಲಿ ಓಡುವುದನ್ನು ನಿಲ್ಲಿಸಿ ಕೇಳಿತು, "ಹೌದೆ? ಚೆನ್ನಾಗಿ ಗೊತ್ತೆ?"

"ಖಂಡಿತ, ದಣಿಗಳೇ. ದಣಿಗಳ ಕಣ್ಣಿಗೆ ಝಳ ಬಡೀದೇ ಇದ್ದಿದ್ದರೆ ಹಿಂದುಗಡೆ ಅವಳ ಜಡೆ ನೇತಾಡ್ತಿರೋದು ಕಂಡಿರೋದು."

ಹೇಡಿ ಹುಲಿ ಪಟ್ಟು ಹಿಡಿಯಿತು. "ನೀನು ತಪ್ಪು ತಿಳಿದಿದಿ ಅಂತ ಅನ್ನಿಸುತ್ತೆ. ನೋಡೋಕ್ಕೆ ಅದು ದೆವ್ವ ಇದ್ದ ಹಾಗೇ ಇತ್ತು."

"ಅಷ್ಟೇಕೆ ದಿಗಿಲು? ಒಬ್ಬ ಹೆಂಗಸಿಗೋಸ್ಕರ ಊಟ ಕಳಕೊಳ್ಳೋದೆ? ಬನ್ನಿ, ಇಬ್ಬರೂ ಒಟ್ಟಿಗೆ ಹೋಗೋಣ."

"ಬೇಡ, ಬೇಡ. ಅಲ್ಲಿಗೆ ಹೋದ ಮೇಲೆ ನೀನು ನನ್ನನ್ನ ಬಿಟ್ಟು ಓಡಿಹೋದರೆ?" ಹುಲಿ ಭಯದಿಂದ ಹೇಳಿತು.

"ಹಾಗಾದರೆ ನಮ್ಮಿಬ್ಬರ ಬಾಲಗಳನ್ನೂ ಒಂದಕ್ಕೊಂದಕ್ಕೆ ಗಂಟುಹಾಕೋಣ. ಆಗ ನಾನು ನಿಮ್ಮನ್ನು ಬಿಟ್ಟುಹೋಗೋದು ಸಾಧ್ಯವಿಲ್ಲ," ಚತುರ ನರಿ ಹೇಳಿತು. ತನ್ನ ಪಾಲಿಗೆ ಬರಲಿದ್ದ ಮೂಳೆಗಳನ್ನು ಬಿಟ್ಟುಬಿಡಲು ಅದು ತಯಾರಿರಲಿಲ್ಲ.

ಹುಲಿ ಒಪ್ಪಿತು. ಅವು ಬಾಲಕ್ಕೆ ಬಾಲ ಗಂಟುಹಾಕಿಕೊಂಡು, ಜತೆಜತೆಯಾಗಿ ಹೊರಟವು.

ರೈತನೂ ಅವನ ಹೆಂಡತಿಯೂ ತಾವು ಹುಲಿಗೆ ಮಾಡಿದ ಮೋಸವನ್ನು ನೆನಸಿಕೊಂಡು ನಗುತ್ತ ಹೊಲದಲ್ಲಿ ಕುಳಿತಿದ್ದರು. ಇದ್ದಕ್ಕಿದ್ದಂತೆ ಹುಲಿ ನರಿಗಳು ಒಟ್ಟಿಗೆ ಬರುತ್ತಿದ್ದುದು ಕಾಣಿಸಿತು.

"ಓಡೇ, ನಮ್ಮ ಕತೆ ಮುಗೀತು ಕಣೇ," ರೈತ ಕೂಗಿಕೊಂಡ.

ಹೆಂಡತಿ ಶಾಂತವಾಗಿ ಹೇಳಿದಳು, "ಅದು ಯಾಕೋ! ಸ್ವಲ್ಪ ಸುಮ್ಮನೆ ಗಲಾಟೆ ಮಾಡದೇ ಇರಿ. ನಿಮ್ಮ ಗಲಾಟೇಲಿ ನನ್ನ ಮಾತು ನನಗೇ ಕೇಳಿಸ್ತಿಲ್ಲ."

ಆ ಪ್ರಾಣಿಗಳೆರಡೂ ಹತ್ತಿರ ಬರುವವರೆಗೂ ಕಾದಿದ್ದು ಆ ಮೇಲೆ ನಮ್ರತೆಯಿಂದ ಹೇಳಿದಳು; "ಇಂಥ ಕೊಬ್ಬಿದ ಹುಲೀನ ತಂದು ಕೊಟ್ಟು ತುಂಬ ಉಪಕಾರ ಮಾಡಿದೆ, ನರಿಯಣ್ಣ. ಒಂದೇ ಒಂದು ನಿಮಿಷ ತಾಳು. ಅದನ್ನ ನಾನು ತಿಂದು ಮುಗಿಸತೀನಿ. ಆಮೇಲೆ ನೀನು ಅದರ ಮೂಳೇನ ತಿನ್ನುವಿಯಂತೆ."

ಇದನ್ನು ಕೇಳಿ ಹುಲಿ ಭಯದಿಂದ ಹುಚ್ಚುಹಿಡಿದಂತಾಗಿ, ತನ್ನ ಬಾಲಕ್ಕೆ ನರಿಯ ಬಾಲ ಕಟ್ಟಿರುವುದನ್ನೂ ಮರೆತು ಒಂದೇ ಉಸುರಿಗೆ ಓಡಿತು. ಓಡುವಾಗ ಜತೆಗೇ ನರಿಯನ್ನೂ ದಡದಡನೆ ಎಳೆದುಕೊಂಡು ಕಲ್ಲು ಮುಳ್ಳು ಎಂದು ನೋಡದೆ ಓಡಿತು.

ನಿಲ್ಲುನಿಲ್ಲೆಂದು ನರಿ ಎಷ್ಟೇ ಕೂಗಲಿ, ಅರಚಲಿ, ಅದೆಲ್ಲ ವ್ಯರ್ಥವಾಯಿತು. ಹಿಂದಿನಿಂದ ನರಿ ಕೂಗುತ್ತಿದ್ದುದು ಹುಲಿಯ ಗಾಬರಿಯನ್ನು ಇದ್ದಿದ್ದೂ ಹೆಚ್ಚಿಸಿತು. ಹಳ್ಳಕೊಳ್ಳ, ದಿಣ್ಣೆತಿಟ್ಟುಗಳೊಂದನ್ನೂ ಗಮನಿಸದೆ ನರಿಯನ್ನೂ ಎಳೆದುಕೊಂಡು ಹುಚ್ಚಾಗಿ ದಣಿವಿನಿಂದ ಸಾಯುವಂತಾಗುವವರೆಗೂ ಅದು ಓಡಿತು. ನರಿಯಂತೂ ಮೈಯೆಲ್ಲ ತರಿದು ಬೊಬ್ಬೆಯೆದ್ದು ಸತ್ತುಹೋಯಿತು.

ರೈತನಿಗೂ ಅವನ ಹೆಂಡತಿಗೂ ಆ ಹುಲಿ ಮತ್ತೆ ಕಿರಕುಳ ಕೊಡಲಿಲ್ಲ.

ಹೇಳಿದವರು: **ಇಕ್ರಮ್ ಚುಗ್ತಾಯಿ**
ಚಿತ್ರಗಳು: **ನಹೀರ್ ಜಾಫರಿ**

## ಫಿಲಿಪ್ಪೈನ್ಸ್

# ಬೆಸ್ತರವನ ಮಗಳು

ಪಾಂಗಸಿನಿಯನ್ ಪ್ರಾಂತದ ಲಿಂಗಾಯೆನ್ ಕೊಲ್ಲಿ ನೋಡಲು ತುಂಬ ಸುಂದರ. ಆದರೆ ಅದರ ಮಿನುಗುವ ಸೌಂದರ್ಯದ ಕೆಳಗೆ ಅಪಾಯ ಅಡಗಿದೆ. ಆ ಕೊಲ್ಲಿಯಲ್ಲಿ ಒಂದು ಮಡುವಿದೆ. ಅದು ಈಜಲುಹೋದವರನ್ನು ಥಟ್ಟನೆ ಎಳೆದುಕೊಂಡು ಪಾತಾಳಕ್ಕೆ ಒಯ್ಯುತ್ತದೆ. ಪ್ರತಿವರ್ಷವೂ ಯಾರಾದರೊಬ್ಬರು, ಅದರಲ್ಲಿಯೂ ಹೆಚ್ಚಾಗಿ ಹುಡುಗಿಯರು, ಈ ಸುಳಿಗೆ ಆಹುತಿಯಾಗುತ್ತಾರೆ. ಹಿಂದೆ ಒಬ್ಬ ಬೆಸ್ತರವನ ಮಗಳು ಕೊಲ್ಲಿಯ ದೇವತೆಯೊಂದಿಗೆ ಇರಲು ಒಪ್ಪಲಿಲ್ಲವಂತೆ. ಆಗಿನಿಂದ ಆ ದೇವರು ವರ್ಷಕ್ಕೊಂದು ಜೀವ ಬೇಡುತ್ತಾನೆ ಎಂದು ಹೇಳುತ್ತಾರೆ. ಅದರ ಕಥೆ ಹೀಗಿದೆ:

ಬಹಳ ಹಿಂದೆ, ಸ್ಪೇನ್ ದೇಶದ ಜನ ಬಂದು ಫಿಲಿಪ್ಪೈನ್ಸಿನ ಜನರನ್ನು ಆಳಲು ಷುರುಮಾಡುವುದಕ್ಕೂ ಮೊದಲು, ಒಬ್ಬ ಬೆಸ್ತರವನು ತನ್ನ ಹೆಂಡತಿ ಹಾಗೂ ಒಬ್ಬಳೇ ಮಗಳೊಂದಿಗೆ ವಾಸವಾಗಿದ್ದ. ಮಗು ನಗುನಗುತ್ತ ಸದಾ ಸಂತೋಷವಾಗಿರುತ್ತಿದ್ದುದರಿಂದ ತಂದೆತಾಯಿಯರು ಅದಕ್ಕೆ ಮಾಲಿಕೆತ್ ಎಂದು ಹೆಸರಿಟ್ಟರು. ಹುಡುಗಿ ಪುಟ್ಟದ್ದಾಗಿದ್ದರೂ ಚುರುಕಾಗಿ ಗಟ್ಟಿಮುಟ್ಟಾಗಿದ್ದಳು. ಮುಂಜಾನೆ ತಂದೆತಾಯಿಯರು ಏಳುವ ಹೊತ್ತಿಗಾಗಲೇ ಅವಳು ಅನ್ನ, ಹುರಿದ ಮೀನು, ಅಕ್ಕಿ ಅರೆದು ಮಾಡಿದ ಬಿಸಿಬಿಸಿ ಪಾನೀಯಗಳ ಬೆಳಗಿನ ಊಟವನ್ನು ಸಿದ್ಧಮಾಡಿರತ್ತಿದ್ದಳು.

ಮಗಳು ಬಟ್ಟೆ ಒಗೆಯುವುದನ್ನೂ ಅಡಿಗೆ ಮಾಡುವುದನ್ನೂ ನೋಡುವಾಗ ಆ ಮುದಿ ತಂದೆತಾಯಿಯರು "ಇವಳಿಲ್ಲದೆ ಹೋದರೆ ನಮ್ಮ ಗತಿಯೇನು?" ಎಂದು ತಮ್ಮ ನಡುವೆ ಕೇಳಿಕೊಳ್ಳುತ್ತಿದ್ದರು. ಸಮುದ್ರದ ದಂಡೆಗುಂಟ ಗಾಳಿಯಂತೆ ಓಡುವಾಗ ಅವಳಿಗಾಗುತ್ತಿದ್ದ ಆನಂದವನ್ನು ನೋಡಲು ಅವರಿಗೆ ಸಂತೋಷವೆನಿಸುತ್ತಿತ್ತು. ತನ್ನ ಗಟ್ಟಿಯಾದ ಮರದ ದೋಣಿಯಲ್ಲಿ ಕುಳಿತು ಸಮುದ್ರಯಾನ ಮಾಡುವುದೆಂದರೆ ಅವಳಿಗೆ ತುಂಬ ಮೆಚ್ಚುಗೆ. ಮುಚ್ಚಿ ಹರಿಯುವ ಸಮುದ್ರದ ಕೊಲ್ಲಿಗಳನ್ನೂ ನಿರ್ಜನವಾದ ಗುಹೆಗಳನ್ನೂ ಪತ್ತೆಮಾಡುವುದೆಂದರೆ ಅವಳಿಗೆ ತುಂಬ ಆಸೆ.

ಒಂದು ದಿನ ಸಂಜೆ ಅವಳು ಒಂದು ವಿಚಿತ್ರವಾದ ಸಮುದ್ರದ ಸಸಿಯನ್ನು ಹಿಡಿದು ಮನೆಗೆ ಬಂದಳು. "ಇದು ಎಲ್ಲಿತ್ತೆ?" ಎಂದು ತಾಯಿ ಕೇಳಿದಳು.

"ಸ್ನಾನ ಮಾಡಲು ಒಂದು ಅದ್ಭುತವಾದ ಸಣ್ಣ ಕೊಲ್ಲಿ ಹುಡುಕಿದೀನಿ. ನಾನೇ ಮೊದಲು ಅಲ್ಲಿ ಕಾಲಿಟ್ಟಿರೋದು ಅಂತ ಕಾಣುತ್ತೆ. ಬೆಟ್ಟದ ಕೆಳಗಿದೆ ಅದು. ಇದು ಅಲ್ಲೀದು." ಮಾಲಿಕೆತ್ ದೂರದ ಕಡಿದಾದ ಕಲ್ಲುಬೆಟ್ಟದ ಕಡೆ ಕೈತೋರಿಸುತ್ತ ಹೇಳಿದಳು.

"ಅದು ಕೆಟ್ಟ ಜಾಗ ಮಗು." ತಂದೆ ಗಾಬರಿಯಿಂದ ಹೇಳಿದ. "ಈ ಕೊಲ್ಲಿಯ ದೇವತೆ ಮಾಕ್ಕಿಲ್ ನಿದ್ರೆ ಮಾಡಲು ಅಲ್ಲಿಗೆ ಹೋಗ್ತಾನೆ ಅಂತಾರೆ. ಯಾರಾದರೂ ಮನುಷ್ಯರು ಆತನ ಶಾಂತಿಯನ್ನು ಕದಡಿವರೆ ಅವನು ಅವರನ್ನು ಶಿಕ್ಷಿಸುತಾನಂತೆ. ಅಲ್ಲಿಗೆ ಮತ್ತೆ ಹೋಗೋಲ್ಲ ಅಂತ ಮಾತು ಕೊಡು."

ಮಾಲಿಕೆತ್ ನಕ್ಕಳು, "ಅಪ್ಪ, ಅಲ್ಲಿ ಯಾವ ದೇವತೆಯೂ ಇಲ್ಲ. ಇರೋವು ಅಂದರೆ ಅಪರೂಪದ ಮೀನುಗಳು, ಪಕ್ಕಿಗಳು. ನೀನು ಬೇಡ ಅನ್ನೋದಾದರೆ ನಾನು ಹೋಗೋಲ್ಲ ಅಂತ ಮಾತುಕೊಡ್ತೀನಿ."

ಕೊಲ್ಲಿಯ ದೇವತೆ ಮಾಸ್ಕಿಲ್ ತನ್ನ ಸಣ್ಣ ಕೊಲ್ಲಿಯಲ್ಲಿ ಮಾಲಿಕೆತ್ ಸ್ನಾನ ಮಾಡುವುದನ್ನು ನೋಡಿದ್ದ. ಆಗ ತಾನೇ ಅವನ ಒಬ್ಬಳೇ ಮಗಳು ತೀರಿಕೊಂಡಿದ್ದಳು. ಮಾಲಿಕೆತ್ ಅವಳ ಸ್ಥಾನದಲ್ಲಿ ಮಗಳಾಗಿರಲಿ ಎಂದು ಅವನ ಆಸೆ. ಅವನು ತನ್ನ ಆಳು ರಾಕ್ಷಸಮೀನನ್ನು ಕರೆದು ಹೇಳಿದ, "ಅವಳನ್ನ ನೋಡಿದರೆ ನನ್ನ ಮುದ್ದುಮಗಳ ಜ್ಞಾಪಕ ಬರುತ್ತೆ. ಅವಳು ಮುಂದಿನ ಸಲ ಬಂದಾಗ ಅವಳ ದೋಣೀನ ನನ್ನ ಕೊಲ್ಲಿಯ ಗುಹೆಗೆ ನಡಸಿಕೊಂಡು ತಾ."

ಮುಂದಿನ ಸಲ ಮಾಲಿಕೆತ್ ತನ್ನ ಮರದ ದೋಣಿಯಲ್ಲಿ ಕುಳಿತು ಹೊರಟಾಗ ಅದು ದಾರಿತಪ್ಪಿ ಗುಪ್ತಗವಿಯ ಕಡೆ ಹೊರಟಿತು. ಮಾಲಿಕೆತ್‌ಳಿಗೆ ತಂದೆಗೆ ಕೊಟ್ಟ ಮಾತನ್ನು ಮುರಿಯಲು ಇಷ್ಟವಿರಲಿಲ್ಲ. ದೋಣಿಯ ದಿಕ್ಕನ್ನು ಬದಲಾಯಿಸಲು ತುಂಬ ಪ್ರಯತ್ನಪಟ್ಟಳು. ಆದರೆ ಅದು ವ್ಯರ್ಥವಾಯಿತು.

ಅವಳ ದೋಣಿ ಬಹುಬೇಗ ಕೊಲ್ಲಿಯೊಳಕ್ಕೆ ಸರಿದು, ನೀರಿನೊಳಗೆ ಆಳವಾದ ಸುರಂಗಮಾರ್ಗದ ಕಡೆಗೆ ಎಳೆಯತೊಡಗಿತು. ಮೊದಮೊದಲು ಅವಳಿಗೆ ಕೊಂಚ ಭಯವಾಯಿತು. ಆದರೆ ಸುತ್ತಮುತ್ತಣ ಅದ್ಭುತ ದೃಶ್ಯಗಳು ಅವಳ ಭಯವನ್ನು ಮರಸಿದವು. ದಂಡೆಯ ಎರಡೂ ಬದಿ ಬಣ್ಣಬಣ್ಣದ ಸುವಾಸನೆ ಬೀರುವ ಹೂವುಗಳಿದ್ದುವು. ಫಳಫಳ ಮಿನುಗುವ ಹಣ್ಣಿನ ಭಾರಕ್ಕೆ ತೊನೆಯುತ್ತ ನಿಂತಿದ್ದ ಎತ್ತರವಾದ ಮರಗಳಿದ್ದುವು. ಕೆಳಗೆ ತಿಳಿನೀರಿನಲ್ಲಿ ಬಗೆಬಗೆಯ ಆಕಾರ, ಗಾತ್ರ, ಬಣ್ಣಗಳ ಮೀನುಗಳಿದ್ದುವು. ಅವೆಲ್ಲವೂ ಮಾತಾಡುತ್ತಿದ್ದವು, ನಗುತ್ತಿದ್ದವು. ಆಶ್ಚರ್ಯವೆಂದರೆ ಮಾಲಿಕೆತ್‌ಳಿಗೆ ಅವೆಲ್ಲವೂ ಅರ್ಥವಾಗುತ್ತಿತ್ತು.

"ಬಾ, ಮಾಲಿಕೆತ್, ಬಾ," ಅವು ಕೂಗಿ ಕರೆದುವು. "ನಮ್ಮ ದಣಿಯ ದೇಶಕ್ಕೆ ನಿನಗೆ ಸ್ವಾಗತ. ಸದಾ ಕಾಲ ನಮ್ಮೊಡನೆ ಇದ್ದು ಸುಖವಾಗಿರುವೆಯಂತೆ ಬಾ."

ಮಾಲಿಕೆತ್ ಅವುಗಳತ್ತ ಕೈ ಚಾಚಿದಳು. ಆದರೆ ತಕ್ಷಣ ಚಾಟಿಯ ಏಟಿನಂತಹ ದೊಡ್ಡ ಶಬ್ದವಾಗಿ ಮೀನುಗಳೆಲ್ಲ ಮಾಯವಾದುವು. ಮಾಲಿಕೆತ್ ಭಯದಿಂದ ಹುಟ್ಟುಗೋಲನ್ನು ಹಿಡಿದುಕೊಂಡಳು. ಆದರೆ ಅವಳು ಅದನ್ನು ನಡಸುವ ಮೊದಲೇ ಅವಳ ದೋಣಿ ದಡಕ್ಕೆ ಬಡಿದು ಅವಳನ್ನು ಮೃದುವಾದ ಪಾಚಿಯ ನೆಲದ ಮೇಲೆ ಎತ್ತಿ ಹಾಕಿತು.

ಮಾಲಿಕೆತ್ ಕತ್ತೆತ್ತಿ ನೋಡಿದಾಗ ಅರ್ಧ ಮಾನವ, ಅರ್ಧ ಮೀನಿನ ಶರೀರವುಳ್ಳ ಒಬ್ಬ ಎತ್ತರವಾದ ಕಂಚಿನ ವ್ಯಕ್ತಿ ಕಾಣಿಸಿಕೊಂಡ. ಅವನು ಫಳಫಳನೆ ಹೊಳೆಯುವ ಕಿರೀಟ ತೊಟ್ಟು, ಕೈಯಲ್ಲಿ ಭವ್ಯವಾದ ಬೆಳ್ಳಿಯ ಹಾವುಮೀನಿನ ಆಕಾರದ ದಂಡ ಹಿಡಿದಿದ್ದ. "ಹೆದರಬೇಡ, ಮಾಲಿಕೆತ್," ಆ ವಿಚಿತ್ರಜೀವಿ ಗಟ್ಟಿಯಾಗಿ ಮೊಳಗಿದ. "ನಾನು ಮಾಸ್ಕಿಲ್. ಈ ಕೊಲ್ಲಿಯ ದೇವತೆ. ನೀನು ನನ್ನ ಮುದ್ದಿನ ಮಗಳ ಸ್ಥಾನ ತೆಗೆದುಕೊಳ್ಳಲೆಂದು ನಿನ್ನನ್ನು ಇಲ್ಲಿಗೆ ಕರೆತಂದಿದ್ದೇನೆ. ನೀನು ಬಯಸುವುದೆಲ್ಲವೂ ಇಲ್ಲಿದೆ."

"ಆದರೆ ನನ್ನ ತಂದೆ ತಾಯಿಗಳು ನಾನಿಲ್ಲವೆಂದು ಕೊರಗುತ್ತಾರೆ. ದಯವಿಟ್ಟು ನನ್ನನ್ನು ಬಿಟ್ಟುಬಿಡು," ಮಾಲಿಕೆತ್ ಗೋಳಾಡತೊಡಗಿದಳು.

"ಅದಂತೂ ಸಾಧ್ಯವೇ ಇಲ್ಲ," ಮಾಸ್ಕಿಲ್ ಅಬ್ಬರಿಸಿದ. ಅವನ ಕೋಪಕ್ಕೆ ಸಮುದ್ರದ ತಳ ನಡುಗಿತು.

ಆದರೆ ಕೂಡಲೇ ಹುಡುಗಿಯ ಭೀತಿಯನ್ನು ಕಂಡು ಅವನು ದನಿ ಬದಲಾಯಿಸಿ, ಹೆಚ್ಚು ಮೃದುವಾಗಿ ಮಾತಾಡಿದ, "ನೀನು ಇಲ್ಲಿ ಕೊಂಚ ದಿನ ಇದ್ದಮೇಲೆ ನಿನಗೆ ಆ ನಿನ್ನ ಕೊಳಕು ಮನೆ ಮರೆತುಹೋಗುತ್ತದೆ." ಅವನು ನವರತ್ನಖಚಿತವಾದ ಸುಂದರವಾದ ಭವನದ ಕಡೆ ಕೈ ಬೀಸಿ ತೋರಿಸುತ್ತ ಹೇಳಿದ. "ಅಲ್ಲಿ ನೋಡು. ಆ ಬೆಳ್ಳಿಯ ಅರಮನೆ. ಅದು ನಿನ್ನ ಮನೆ. ಅಲ್ಲಿ ಬೇಕಾದ ಹಾಗೆ ಆಳುಕಾಳು, ಜತೆಗಾತಿಯರಿರುತ್ತಾರೆ: ತೊಡಲು ಒಡವೆ ವಸ್ತ್ರ, ಉಣ್ಣಲು ಊಟತಿಂಡಿ ಎಲ್ಲ ಇರುತ್ತವೆ. ನನ್ನ ಜತೆ ಬಾ, ಮಗು."

ಮಾಲಿಕೆತ್ ಅವನು ಹೇಳಿದಂತೆ ಕೇಳಲು ನಿರಾಕರಿಸಿದಳು. ಮಾಸ್ಕಿಲ್ ಚಪ್ಪಾಳೆ ತಟ್ಟಿದ. ಇಬ್ಬರು ಆಳುಗಳು ಬಂದು, ಅವಳನ್ನು ಬಲಾತ್ಕಾರದಿಂದ ಎತ್ತಿಕೊಂಡು ಅರಮನೆಗೆ ಒಯ್ದರು. ಮೂಲೆಮೂಲೆಗಳಿಂದ ಜಲಕನ್ಯೆಯರು ಬಂದರು. ಅವರು ಅವಳಿಗೆ ಸ್ನಾನ ಮಾಡಿಸಿ, ಬೆಳ್ಳಿಯ ಮೇಲಂಗಿ ತೊಡಿಸಿದರು. ಒಬ್ಬಳು ಅವಳ ತಲೆಯ ಮೇಲೆ ಹೂವಿನ ಆಕಾರದ ಕಿರೀಟವಿಟ್ಟಳು. ಉಳಿದವರು ಸಮುದ್ರದ ಆಳದ ಗುಹೆಗಳಿಂದ ಮುದ್ದಾದ ಒಡವೆಗಳನ್ನು ತಂದರು. ಆದರೆ ಮಾಲಿಕೆತ್‌ಳಿಗೆ ಈ ಯಾವ ಸುಂದರ ವಸ್ತುವಿನಲ್ಲೂ ಆಸಕ್ತಿಯಿರಲಿಲ್ಲ. ಅವಳು ಅಳುತ್ತ ಇಷ್ಟು ಮಾತ್ರ ಹೇಳಿದಳು, "ನಿಮ್ಮ ದಣಿಗೆ ನನ್ನನ್ನು ವಾಪಸು ಕಳಿಸಲು ಹೇಳಿ. ನಮ್ಮ ತಂದೆತಾಯಿ ಮುದುಕರು. ಅವರಿಗೆ ನನ್ನ ಸಹಾಯದ ಅಗತ್ಯವಿದೆ."

ಯಾರೂ ಹಿಂದೆಂದೂ ಲಿಂಗಯೆನ್ ಕೊಲ್ಲಿಯ ದೇವತೆಯ ಮಾತನ್ನು ತೆಗೆದುಹಾಕಿರಲಿಲ್ಲ. ಅವನು ಮಾಲಿಕೆತ್‌ಳನ್ನು ತನ್ನೊಡನೆ ಉಳಿಸಿಕೊಳ್ಳಲು ದೃಢಮನಸ್ಸು ಮಾಡಿದ. ಅವಳ ಮನೋರಂಜನೆಗೆ ಆಸ್ಥಾನದ ಅತ್ಯುತ್ತಮ ಆಟಗಾರರನ್ನು ಕರೆಸಿದ. ಅವಳಿನ್ನೂ ಹುಡುಗಿ. ನಕಲಿ, ಯಕ್ಷಿಣಿ, ಕಸರತ್ತುಗಳನ್ನು ಮಾಡುವ ಮೀನುಗಳು ಬಂದು ತಮ್ಮ ತಮ್ಮ ಆಟ ತೋರಿಸಿದಾಗ ಅವಳು ಕ್ಷಣಕಾಲ ಮನೆಯ ಹಂಬಲವನ್ನು ಮರೆತಳು. ತಮ್ಮ ದಣಿಯಂತೆಯೇ ಅರ್ಧ ಮಾನವ, ಅರ್ಧ ಮೀನಿನ ಶರೀರವುಳ್ಳ ಪುಟ್ಟಪುಟ್ಟ ಸುಂದರ ಹುಡುಗಿಯರೂ ಹುಡುಗರೂ ಅವಳಿಗೆ ತಮ್ಮ ಕಡಲಾಟಗಳನ್ನು ಹೇಳಿಕೊಟ್ಟರು. ಅವಳು ನಕ್ಕದ್ದನ್ನು ಕೇಳಿ ಮಾಸ್ಕಲ್‌ಗೆ ಸಂತೋಷವಾಯಿತು.



"ಪುಟ್ಟ ಹುಡುಗಿಗೆ ಅವಳ ಹೊಸ ಮನೆ ಇಷ್ಟವಾಯಿತು," ಅಂದುಕೊಂಡ ಮಾಸ್ಕಲ್. ಆದರೆ ಅವನ ಅಭಿಪ್ರಾಯ ತಪ್ಪಾಗಿತ್ತು. ಬಹುಬೇಗ ಅವಳಿಗೆ ಮನೆಯ ಹಂಬಲ ಮರುಕಳಿಸಿತು. ಒಂದು ದಿನ ಅವಳಿಗೆ ಒಂದು ಧೂಳು ಹಿಡಿದ ಬಡುವಿನ ಮೇಲೆ ಪುಟ್ಟ ಮಂತ್ರದ ಕನ್ನಡಿಯೊಂದು ಸಿಕ್ಕಿತು. ಅದರಲ್ಲಿ ಅವಳಿಗೆ ಕಾಹಿಲೆಯಿಂದ ನರಳುತ್ತಿದ್ದ ತನ್ನ ತಾಯಿ ಹಾಗೂ ಮುದಿ ತಂದೆಯರು ಆತಂಕದಿಂದ ತನಗಾಗಿ ಹುಡುಕಾಡುತ್ತಿದ್ದುದು ಕಾಣಿಸಿತು.

ಅವಳಂತೆಯೇ ಪೂರ್ಣ ಮನುಷ್ಯರೂಪವಿದ್ದ ಅವಳ ದಾದಿ ಆಕುಲಾವ್ ಮಾಲಿಕೆತ್ ಗೋಳಾಡುತ್ತಿರುವುದನ್ನು ಕಂಡು ಕೇಳಿದಳು. "ನೀನು ನಿಜವಾಗಿಯೂ ಮನೆಗೆ ಹೋಗಬೇಕೆ, ಮಗು?"

"ಹೌದು, ಹೋಗಬೇಕು. ಹೋಗಲೇಬೇಕು."

"ನಿನಗೆ ಹೇಗನ್ನಿಸುತ್ತಿದೆಯೆಂದು ನಾನು ಬಲ್ಲೆ. ಯಾಕೆಂದರೆ ಈ ಜನ ನಿನ್ನಂತೆ ನನ್ನನ್ನೂ ಬಲಾತ್ಕಾರದಿಂದ ಇಲ್ಲಿಗೆ ಎಳೆದು ಕರೆತಂದರು. ಆಗ ನಾನು ಹುಡುಗಿ. ಈಗ ಮುದುಕಿಯಾಗಿದೀನಿ. ಆಮೇಲೆ ನಾನು ಮತ್ತೆ ನಮ್ಮ ಮನೆಯವರನ್ನು ನೋಡಲೇ ಇಲ್ಲ."



ಮಾಲಿಕೆತ್ ಗೋಗರೆದಳು, "ನನಗೆ ವಾಪಸು ಮನೆಗೆ ಹೋಗಲು ಸಹಾಯಮಾಡು. ನೀನೂ ನನ್ನ ಜತೆ ಯಾಕೆ ಬಂದುಬಿಡಬಾರದು?"

ದಾದಿ ಹೇಳಿದಳು, "ಇಲ್ಲ. ನನಗೀಗ ವಯಸ್ಸಾಯಿತು. ಆದರೆ ನನಗೆ ಒಂದು ಆಸೆಯಿದೆ. ನಿನ್ನ ಮಂತ್ರದ ಕನ್ನಡಿಯನ್ನು ಬಿಟ್ಟುಹೋದರೆ. ಮನುಷ್ಯಪ್ರಪಂಚದಲ್ಲಿ ಏನು ನಡೆದಿದೆ. ಹಾಗೂ ನಿನಗೆ ಏನಾಗುತ್ತಿದೆಯೆಂಬುದನ್ನು ನಾನು ಸದಾ ನೋಡುತ್ತಿರಬಹುದು. ಇಲ್ಲಿ ಕೇಳು. ಇವತ್ತು ರಾತ್ರಿ ಬಂದು ನಿನ್ನನ್ನು ಕರೀತೀನಿ. ಅರಮನೆಯಿಂದ ತಪ್ಪಿಸಿಕೊಂಡು ಹೋಗಲು ಸಹಾಯಮಾಡ್ತೀನಿ. ಆದರೆ ಒಮ್ಮೆ ವಿಶಾಲ ಸಮುದ್ರ ತಲಪಿದ ಮೇಲೆ ನಿನ್ನನ್ನು ನೀನು ನೋಡಿಕೊಳ್ಳಬೇಕು."

ಆ ರಾತ್ರಿ ಆಕುಲಾವ್ ಆಳು ರಾಕ್ಷಸಮೀನಿನ ಪಾನೀಯದಲ್ಲಿ ನಿದ್ರೆಯ ಪುಡಿಯನ್ನು ಬೆರಸಿದಳು. ಆಮೇಲೆ ಗುಪ್ತಮಾರ್ಗಗಳ ಮೂಲಕ ಮಾಲಿಕೆತ್‌ಳನ್ನು ಅರಮನೆಯಾಚೆ ಅವಳ ದೋಣಿಯಿದ್ದಲ್ಲಿಗೆ ಕರೆತಂದಳು. ಅಲ್ಲಿ ಆಕುಲಾವ್‌ನ ನಂಬಿಕೆಗೆ ಪಾತ್ರನಾದವನೊಬ್ಬ ಅವರನ್ನು ಎದುರುಗೊಂಡ. ಅವನು ನೀರೊಳಗಿನ ಸುರಂಗದ ಮೂಲಕ ದೋಣಿಯನ್ನು ನಡಸಿಕೊಂಡು ಹೋಗಿ ಮಾಲಿಕೆತ್ ಸಮುದ್ರ ತಲಪಲು ಸಹಾಯ ಮಾಡಿದ. ಅವನು ಬೀಳ್ಕೊಟ್ಟಮೇಲೆ ಮಾಲಿಕೆತ್ ಮನೆಯ ದಾರಿ ಹಿಡಿದಳು.

ಮಾಲಿಕೆತ್ ತಪ್ಪಿಸಿಕೊಂಡು ಹೋದುದು ಪತ್ತೆಯಾದಾಗ ಮಾಸ್ಕಿಲ್ ದೇವತೆ ರಾಕ್ಷಸಮೀನಿಗೆ ಅವಳನ್ನು ವಾಪಸು ಕರೆತರುವಂತೆ ಅಪ್ಪಣೆ ಮಾಡಿದ. ರಾಕ್ಷಸಮೀನು ಎಷ್ಟೇ ಪ್ರಯತ್ನಿಸಲಿ, ನಿದ್ರೆಯ ಪುಡಿಯ ಪ್ರಭಾವದಿಂದಾಗಿ ಅವನಿಗೆ ಎಂದಿನಂತೆ ವೇಗವಾಗಿ ಈಜಲಾಗಲಿಲ್ಲ. ಅವನು ಬೆನ್ನಟ್ಟಿ ಬರುತ್ತಿರುವುದನ್ನು ಕಂಡು ಮಾಲಿಕೆತ್ ತನ್ನ ಬಲವೆಲ್ಲವನ್ನೂ ಬಿಟ್ಟು ದೋಣಿ ನಡಸಿದಳು. ಅವಳು ಆ ಹೊತ್ತಿಗಾಗಲೇ ದಡದ ಹತ್ತಿರ ಬಂದಿದ್ದು. ತಂದೆಯ ಕಣ್ಣಿಗೆ ಬಿದ್ದಿದ್ದಳು. ಅವನೂ ಅವನ ಸ್ನೇಹಿತರೂ ಅವಳ ರಕ್ಷಣೆಗೆ ಓಡಿ ಬಂದರು. ಇನ್ನೇನು ರಾಕ್ಷಸಮೀನು ಕೈಚಾಚಿ ಮಾಲಿಕೆತ್‌ಳನ್ನು ಹಿಡಿದು ಸಮುದ್ರಕ್ಕೆ ಎಳೆದುಕೊಳ್ಳುವುದರಲ್ಲಿದ್ದಾಗ ಅವಳ ತಂದೆ ಅವಳನ್ನು ತನ್ನ ದೋಣಿಯೊಳಕ್ಕೆ ಕರೆದುಕೊಂಡ. ಉಳಿದ ಬೆಸ್ತರು ರಾಕ್ಷಸಮೀನನ್ನು ಹೊಡೆದಟ್ಟಿದರು. ಮಾಲಿಕೆತ್ ಬೇಗ ಸುರಕ್ಷಿತವಾಗಿ ಮನೆ ಸೇರಿ ತಾಯಿಯ ಜತೆಗೂಡಿದಳು.



ರಾಕ್ಷಸಮೀನು ಮಾಲಿಕೆತ್‌ಳನ್ನು ಕರೆತರಲಿಲ್ಲವೆಂದು ಮಾಕ್ಸಿಲ್ ದೇವತೆಗೆ ಅವನ ಮೇಲೆ ತುಂಬ ಕೋಪ ಬಂದು, ಅವನಿಗೆ ತೀವ್ರ ಶಿಕ್ಷೆ ವಿಧಿಸಿದ. "ನಿನಗೆ ಪ್ರಾಣಾಪಾಯವಾದರೂ ಸರಿಯೆ, ಇನ್ನುಮೇಲೆ ವರ್ಷಕ್ಕೊಮ್ಮೆ ನೀನು ದಂಡೆಗೆ ಹೋಗಿ ಒಬ್ಬ ಹುಡುಗಿಯನ್ನು ಎಳೆದುತರಬೇಕು. ಒಂದಲ್ಲ ಒಂದು ದಿನ ನನ್ನ ಮಗಳ ಸ್ಥಾನಕ್ಕೆ ತಕ್ಕವಳೊಬ್ಬಳು ಸಿಗಬಹುದು" ಎಂದು ಅಪ್ಪಣೆಮಾಡಿದ. ಎಂತಲೇ ವರ್ಷಕ್ಕೊಮ್ಮೆ ಸಮುದ್ರದ ಸುಳಿ ಈಜಲು ಹೋದ ಹುಡುಗಿಯರಲ್ಲಿ ಒಬ್ಬಳನ್ನು ನೀರಿನಾಳಕ್ಕೆ ಸೆಳೆದುಕೊಳ್ಳುತ್ತದೆ; ರಾಕ್ಷಸಮೀನು ತನ್ನ ಬಲಿಷ್ಠವಾದ ತೋಳುಗಳನ್ನು ಬೀಸುವುದರಿಂದ ಆ ಸುಳಿ ಉಂಟಾಗುತ್ತದೆ ಎಂದು ಜನ ಅನ್ನುತ್ತಾರೆ.

ಹೇಳಿದವರು: **ರೋಚಿಯೊ ದುಮಾವುವಲ್**

ಚಿತ್ರಗಳು: **ಎಲಿಸಿಯೊ ಜೋಸ್**

ಶ್ರೀಲಂಕ

# ಹೆಂಟೆಗೂದ್ದ ಮತ್ತು ಚಿರತೆ



ಒಂದಾನೊಂದು ಕಾಲದಲ್ಲಿ ಒಂದು ಕಾಡಿನಲ್ಲಿ ಒಂದು ಚಿರತೆಯಿತ್ತು. ಒಂದು ದಿನ ಸಂಜೆ ಅದು ಎಂದಿನಂತೆ ಬೇಟೆಗೆ ಹೋಯಿತು. ಒಂದು ಜಿಂಕೆಯೊ, ಹಂದಿಯೊ, ಕೊನೆಗೊಂದು ಸಣ್ಣ ಮೊಲವೊ ಸಿಗುವುದೆಂದು ಕೊಂಡಿತ್ತು, ಆದರೆ ಅದಕ್ಕೆ ದೊಡ್ಡ, ಚಿಕ್ಕ ಯಾವೊಂದು ಬೇಟೆಯೂ ಸಿಗಲಿಲ್ಲ. ಚಿರತೆಗೆ ತುಂಬ ಹಸಿವಾಗತೊಡಗಿತು.

ಕೊನೆಗೊಂದು ಹೆಂಟೆಗೊದ್ದ ಎದುರಾಯಿತು. ಚಿರತೆ ಹೇಳಿತು, "ಇವತ್ತು ರಾತ್ರಿ ನೀನೇ ನನಗೆ ಊಟ."

ಅದಕ್ಕೆ ಹೆಂಟೆಗೊದ್ದ, "ನಾನು ನಿನ್ನ ಊಟಕ್ಕೆ ತಕ್ಕಷ್ಟು ದೊಡ್ಡವನಲ್ಲ. ನನ್ನನ್ನು ಬಿಟ್ಟುಬಿಡು" ಅಂದಿತು.

ಚಿರತೆ ಹೇಳಿತು, "ಇಲ್ಲ, ಬಿಡುವುದಿಲ್ಲ. ಹಸಿದವನಿಗೆ ಬರಿಯ ಹೊಟ್ಟೆಗಿಂತ ಒಂದು ತುತ್ತು ಊಟ ಎಷ್ಟೋ ಮೇಲು."



ಚಿರತೆ ಕತ್ತೆತ್ತಿ ಮರ ಕಡಿಯುವವನು ಕೂತಿದ್ದು ದನ್ನು ನೋಡಿತು. ತಾನು ಪೆಟ್ಟೆಗೊದ್ದಕ್ಕೆ ಸೋತಿದ್ದುದು ಯಾರಿಗೂ ತಿಳಿಯಬಾರದೆಂದು ಅದು ಬಯಸಿದ್ದ ಕಾರಣ ಅದಕ್ಕೆ ತುಂಬ ಕೋಪ ಬಂತು. ಅದು ಮರ ಹತ್ತಿ ಹೋಗಿ, ಗುರಗುಟ್ಟುತ್ತ, "ಸಾಕು ನಿಲ್ಲಿಸೋ ನಿನ್ನ ಪ್ಪು ಪ್ಪು ಪ್ಪು. ಇಲ್ಲೀ ತಿಂದುಹಾಕೇನು ನ್ಯೋಡು" ಎಂದು ಅರಚಿತು.

"ಅಯ್ಯೋ ಅಪ್ಪ, ನನ್ನನ್ನು ಕ್ಷಮಿಸಿ ಜೀವ ಉಳಿಸು." ಮರಕಡಿಯುವವನು ಬೇಡಿಕೊಂಡ.

"ನಿನಗೆ ನನ್ನ ಗುಟ್ಟು ಗೊತ್ತಾಗಿಬಿಟ್ಟಿದೆ. ಆದ್ದರಿಂದ ನೀನು ಸಾಯಲೇಬೇಕು." ಎಂದು ಚಿರತೆ ಅಬ್ಬರಿಸಿತು.

"ಈ ಕಾಡಿನ ದೇವರುಗಳ ಆಣೆ. ಈ ಗುಟ್ಟನ್ನು ಯಾರಿಗೂ ಬಿಟ್ಟುಕೊಡೋಲ್ಲ." ಮರ ಕಡಿಯುವವನು ಗೋಗರಿದ.

ಚಿರತೆ ಹೇಳಿತು, "ಉಹ್ಞೂ. ಅದು ಸಾಲದು. ನಿನ್ನ ಹೆಂಡತಿಗೂ ಗುಟ್ಟು ಬಿಟ್ಟುಕೊಡೋಲ್ಲ ಅಂತ ಅವಳ ಮೇಲೆ ಆಣೆ ಇಟ್ಟು ಹೇಳು. ನಿನ್ನ ಮಕ್ಕಳಿಗೂ ಗುಟ್ಟು ಬಿಟ್ಟುಕೊಡೋಲ್ಲ ಅಂತ ಅವರ ಮೇಲೂ ಆಣೆ ಇಟ್ಟು ಹೇಳು." ಮರ ಕಡಿಯುವವನು ಹಾಗೆಯೇ ಮಾಡಿದ. ಆದರೆ ಚಿರತೆಗೆ ತೃಪ್ತಿಯಾಗಲಿಲ್ಲ. "ಹಳ್ಳಿಯ ಉಳಿದೋರಿಗೆ ಹೇಳಿದರೆ?" ಅಂದಿತು.

"ಬುದ್ಧನ ಮೇಲೆ ಆಣೆಯಿಟ್ಟು ಹೇಳ್ತೀನಿ: ಹಳ್ಳೀಲಿ ಸಹ ಯಾರಿಗೂ ಗುಟ್ಟು ಬಿಟ್ಟುಕೊಡೊದಿಲ್ಲ." ಅಂದ ಮರ ಕಡಿಯುವವನು. ಚಿರತೆ ಅವನನ್ನು ಹಳ್ಳಿಗೆ ವಾಪಸು ಹೋಗಲು ಬಿಟ್ಟಿತು.

ಚಿರತೆ ತನ್ನ ಗುಹೆಯಲ್ಲಿ ಗಾಯಗಳನ್ನು ನೆಕ್ಕುತ್ತ ಕೂತುಕೊಂಡಿತು. ಅದಕ್ಕೆ ಇನ್ನೂ ಚಿಂತೆ ಕಾಡುತ್ತಿತ್ತು. "ಈ ಎರಡು ಕಾಲಿನವರನ್ನು ನಂಬೋ ಹಾಗಿಲ್ಲ. ಆ ಕೊರಮ ತನ್ನ ಹೆಂಡತಿಗೆ ಹೇಳಿಬಿಡ್ತಾನೆ ಅಂತ ಅನ್ನಿಸುತ್ತೆ. ಒಂದು ಸಾರಿ ಹೆಂಗಸಿಗೆ ಗುಟ್ಟು ಗೊತ್ತಾಯಿತೂ ಅದು ಇನ್ನು ಗುಟ್ಟಾಗಿ ಉಳಿಯೋಲ್ಲ. ನಾನು ಇವತ್ತು ರಾತ್ರಿಯೇ ಹೋಗಿ, ಆ ಮನುಷ್ಯ ಕೊಟ್ಟ ಮಾತು ಉಳಿಸಿಕೊಂಡಿದಾನೆಯೇ ಅಂತ ಖುದ್ದಾಗಿ ನೋಡಬೇಕು" ಎಂದು ಚಿರತೆ ಯೋಚಿಸಿತು. ಅದು ಬೇಗಬೇಗ ನಡೆದು ಮರ ಕಡಿಯುವವನ ಹಿತ್ತಲಿಗೆ ಬಂದು, ಒಂದು ಗೋಡೆಗೆ ಒರಗಿ ಕುಳಿತು, ಒಳಗೆ ನಡೆಯುವ ಮಾತುಕತೆಯೆಲ್ಲವನ್ನೂ ಕದ್ದು ಕೇಳಿತು.

ಮರ ಕಡಿಯುವವನೂ ಅವನ ಹೆಂಡತಿಮಕ್ಕಳೂ ಚಾಪೆಯ ಮೇಲೆ ಕುಳಿತು ಊಟಮಾಡುತ್ತಿದ್ದರು. ಇದ್ದಕ್ಕಿದ್ದಂತೆ ಮರ ಕಡಿಯುವವನು ಗೊಳ್ಳನೆ ನಗತೊಡಗಿದ.

"ಯಾಕೆ ನಗ್ತಿದೀಯಪ್ಪ?" ಎಂದು ಮಕ್ಕಳು ಕೇಳಿದರು.

"ಶ್ಯ್, ಅದೊಂದು ಗುಟ್ಟು" ಅಂದ ತಂದೆ.

"ಅದೇನು ಗುಟ್ಟು. ನಮಗೂ ಹೇಳಪ್ಪ. ನಾವೂ ನಗ್ತೀವಿ." ಮಗಳು ಗೋಗರೆದಳು.

"ಉಹ್ಞೂ. ಅದನ್ನ ಯಾರಿಗೂ ಹೇಳೋ ಹಾಗಿಲ್ಲ. ಹಾಗಂತ ಬುದ್ಧನ ಮೇಲೆ ಆಣೆ ಇಟ್ಟಿದೀನಿ." ತಂದೆ ಉತ್ತರಿಸಿದ.

ಊಟ ಸಾಗಿದಂತೆ ತಂದೆ ಮತ್ತೆ ನಕ್ಕ. ತಾಯಿ ಮಕ್ಕಳಿಗೆ ಹೇಳಿದಳು. "ನಿಮ್ಮ ಅಪ್ಪಂಗೆ ಹುಚ್ಚು ಹಿಡಿದಿದೆ ಅಂತ ಕಾಣುತ್ತೆ. ಅದೋ, ನಕ್ಕುನಕ್ಕು ಉಂಡ ಅನ್ನ ಗಂಟಲಿಗೆ ಸಿಕ್ಕಿಕೊಂಡಿತು." ಅನ್ನುತ್ತ ಅವಳು ಗಂಡನ ಬೆನ್ನು ನೀವಿ, ಬಾಯಿಯ ಹತ್ತಿರ ಒಂದು ಲೋಟ ನೀರು ಹಿಡಿದಳು.

ಊಟ ಮುಗಿಸಿ ಮಕ್ಕಳು ಅವರವರ ಚಾಪೆಯ ಮೇಲೆ ಮಲಗಲು ಹೋದರು. ಮರ ಕಡಿಯುವವನು ಅವನ ಬೆತ್ತದ ಮಂಚದ ಮೇಲೆ ಕಾಲು ಚಾಚಿದ. ಹೆಂಡತಿ ಮೂಲೆಯಲ್ಲಿ ಅವಳ ಚಾಪೆಯ ಮೇಲೆ ಮಲಗಿದಳು. ಗಂಡಹೆಂಡತಿ ಇಬ್ಬರಿಗೂ ನಿದ್ರೆ ಬರಲಿಲ್ಲ. ಒಂದೊಂದು ಸಾರಿ ಕಣ್ಣು ಮುಚ್ಚಿದಾಗಲೂ ಅವನಿಗೆ ನಗು ಒತ್ತರಿಸಿ ಬರುತ್ತಿತ್ತು. ಅವನ ಗುಟ್ಟು ಗೊತ್ತಾಗುವವರೆಗೆ ಹೆಂಡತಿಗೂ ನಿದ್ರೆ ಬರುವಂತಿರಲಿಲ್ಲ. ಮರ ಕಡಿಯುವವನು ಮತ್ತೆ ಹ್ಹ ಹ್ಹ ಹ್ಹ ಎಂದು ನಕ್ಕ.

ಹೆಂಡತಿ ಎದ್ದು ಕೂತಳು. "ಏನದು ಗುಟ್ಟು? ಹೇಳಿ. ಮಕ್ಕಳು ಮಲಗಿದಾರೆ. ಯಾರಿಗೂ ಕೇಳಿಸೋಲ್ಲ," ಅಂದಳು ಅವಳು.

"ನಿನಗೆ ಸಹ ಹೇಳೋಲ್ಲ ಅಂತ ಆಣೆ ಇಟ್ಟಿದೀನಿ." ಅಂದ ಗಂಡ. ಹೆಂಡತಿ ಎಷ್ಟು ಗೋಗರೆದಳೆಂದರೆ ಗಂಡ ಕೊನೆಗೂ ಗುಟ್ಟು ಬಿಟ್ಟುಕೊಡಬೇಕಾಯಿತು. ಚಿರತೆ ಹೆಂಟೆಗೊದ್ದಗಳು ಕಾದಾಡಿದ್ದು, ಕೊನೆಗೆ ಹೆಂಟೆಗೊದ್ದವೇ ಗೆದ್ದದ್ದು. ಚಿರತೆ ತಾನಿದ್ದ ಮರದ ಕೆಳಗೆ ಮಲಗಿಕೊಳ್ಳಲು ಬಂದು 'ಹೆಂಟೆಗೊದ್ದ ಇಲ್ಲಿ ಕಚ್ಚಿತು, ಅಲ್ಲಿ ಕಚ್ಚಿತು. ಮೈಯೆಲ್ಲ ಕಚ್ಚಿತು' ಎಂದು ಗೋಳಾಡಿದುದು—ಇವೆಲ್ಲವನ್ನೂ ಗಂಡ ಹೆಂಡತಿಗೆ ಹೇಳಿದ.

'ಹ್ಹ ಹ್ಹ ಹ್ಹ' ಎಂದು ಗಂಡ ಹೆಂಡತಿ ಇಬ್ಬರೂ ನಗತೊಡಗಿದರು.

ಇಷ್ಟೂ ಹೊತ್ತು ಚಿರತೆ ಗೋಡೆಯ ಬದಿ ಮುದುಡಿಕೊಂಡು ಕೂತು ಮಾತು ಕೇಳುತ್ತಿತ್ತು. ಮರ ಕಡಿಯುವವನು ಹುಚ್ಚುಹಿಡಿಸುವಂತೆ ಹ್ಹ ಹ್ಹ ಹ್ಹ ಎಂದು ನಕ್ಕದ್ದನ್ನು ಕೇಳಿತು. ಆಮೇಲೆ ಹೆಂಡತಿ ನಕ್ಕದ್ದನ್ನೂ ಕೇಳಿತು. ಅದಕ್ಕೆ ರೋಷ ಉಕ್ಕಿಬಂತು. ಗಂಡ ಹೆಂಡತಿ ಮಲಗಿ ನಿದ್ರೆ ಹೋಗುವವರೆಗೆ ಕಾದಿದ್ದು, ಮನೆಯ ಮೇಲೆ ನೆಗೆದು, ಚಾವಣಿಗೆ ಹೊದಿಸಿದ್ದ ಬತ್ತದ ಹುಲ್ಲಿನ ತಡಿಕೆಯನ್ನು ಮೆಲ್ಲಗೆ ಸರಿಸಿ, ಅದು ಅಟ್ಟದ ಮೇಲೆ ಧುಮುಕಿತು. ಅಲ್ಲಿಂದ ಅಡಿಗೆಮನೆಗೆ ಇಳಿದು ಬಂದು, ಹಿಂದಿನ ಬಾಗಿಲು ತೆಗೆಯಿತು. ಆಮೇಲೆ ಮರ ಕಡಿಯುವವನು ಮಲಗಿದ್ದ ಬೆತ್ತದ ಮಂಚದ ಕೆಳಕ್ಕೆ ಸರಿದು, ಅವನ ಸಮೇತ ಅದನ್ನು ಹೊತ್ತುಕೊಂಡು ಹಿಂದಿನ ಬಾಗಿಲಿನಿಂದ ಹೊರಗೆ ಹೋಯಿತು.

ಚಿರತೆ ಕಾಡು ತಲಪುವವರೆಗೂ ಮರ ಕಡಿಯುವವನಿಗೆ ಎಚ್ಚರವಾಗಲಿಲ್ಲ. ಎಚ್ಚರವಾದಾಗ ಮಂಚ ಸರಿಯುತ್ತಿದೆ ಎಂದು ಅನಿಸಿತು. ಆಗತಾನೇ ಆಕಾಶದಲ್ಲಿ ಚಂದ್ರ ಮೇಲೆ ಬಂದಿದ್ದ. ಮಂಚದ

ತೂತುಗಳ ಮೂಲಕ ಅವನಿಗೆ ಚಿರತೆಯ ಬೆನ್ನಿನ ಮೇಲಿನ ಕಪ್ಪು ಮಚ್ಚೆಗಳು ಕಾಣಿಸಿದವು. ಚಿರತೆ ತನ್ನ ಪ್ರಾಣ ತೆಗೆದುಕೊಳ್ಳದೆ ಬಿಡದೆಂದು ಅವನಿಗೆ ಗೊತ್ತಿದ್ದುದರಿಂದ ಅವನಿಗೆ ಭಯ ಹತ್ತಿತು. ಅದೇ ಹೊತ್ತಿಗೆ ದೊಡ್ಡ ಮರದ ಕೊಂಬೆಯೊಂದು ತೂಗಾಡುತ್ತಿದ್ದುದು ಕಾಣಿಸಿತು. ಮರ ಕಡಿಯುವವನು ಮಿಂಚಿನ ವೇಗದಲ್ಲಿ ಆ ಕೊಂಬೆ ಹಿಡಿದು ಮರ ಹತ್ತಿದ.

ಚಿರತೆಗೆ ಏನು ನಡೆಯಿತೆಂದು ತಿಳಿಯಲಿಲ್ಲ. ಗುಹೆಯ ಬಾಗಿಲು ತಲಪಿ ಮಂಚವನ್ನು ಕೆಳಗಿಳಿಸಿತು. ಆದರೆ ಆ ಕೊರಮ ಮರ ಕಡಿಯುವವನೆಲ್ಲಿ? ಚಿರತೆ ಗೊಣಗುಟ್ಟುತ್ತ ಅವನನ್ನು ಹುಡುಕಿಕೊಂಡು ಹೊರಟಿತು. ಬೆಳ್ದಿಂಗಳಲ್ಲಿ ಅವನು ಮರ ಹತ್ತಿ ಕುಳಿತಿರುವುದು ಕಾಣಿಸಿತು. ಚಿರತೆ ಸದ್ದುಮಾಡದೆ ಮರದ ತಾಳಿಗೆ ಉಗುರುಗಳನ್ನು ಊರಿ ಮರ ಹತ್ತತೊಡಗಿತು.

ಈ ಹೊತ್ತಿಗೆ ಮರ ಕಡಿಯುವವನಿಗೆ ಪೂರ್ತಿ ಎಚ್ಚರವಾಗಿತ್ತು. "ಏಯ್, ಚಿರತೆ ! ನಿನಗೆ ಜೀವದ ಮೇಲೆ ಆಸೆಯಿದ್ದರೆ ಇನ್ನು ಮೇಲೆ ಹತ್ತಬೇಡ. ಇಲ್ಲಿ ಒಂದು ಹೆಂಟೆಗೊದ್ದ ನಿನ್ನನ್ನು ಕಚ್ಚಲು ಕಾಯುತ್ತ ಕೂತಿದೆ" ಎಂದು ಅವನು ಕೂಗಿಕೊಂಡ.

ಚಿರತೆ ಭಯದಿಂದ ಕೆಳಗೆ ಹಾರಿ ಓಟಕಿತ್ತಿತು. ಅದು ಕಣ್ಮರೆಯಾದ ಮೇಲೆ ಮರ ಕಡಿಯುವವನು ನಗುತ್ತ ಮನೆಗೆ ಹಿಂದಿರುಗಿದ.

ಅದೇ ಕೊನೆ. ಅಲ್ಲಿಂದೀಚೆಗೆ ಆ ಚಿರತೆ ಯಾರ ಕಣ್ಣಿಗೂ ಬಿದ್ದಿಲ್ಲ. ಅದು ಬೆಟ್ಟ ದಾಟಿ ಹೋಗಿ, ದೂರದ ಕಾಡಿನಲ್ಲಿ ಮರ ಕಡಿಯುವವರಾಗಲಿ, ಹೆಂಟೆಗೊದ್ದಗಳಾಗಲಿ ಇಲ್ಲದ ಕಡೆ ತನಗಾದ ಅವಮಾನವನ್ನು ಮರೆಸಿಕೊಂಡು ಬಾಳುತ್ತಿದೆ ಎಂದು ಜನ ಹೇಳುತ್ತಾರೆ.

ಹೇಳಿದವರು: **ಇ. ಆರ್. ಎರಾಂಟಿ**
ಚಿತ್ರಗಳು: **ಸುಮನ ದಿಸ್ಸನಾಯಕ**



